ಶ್ರೀ

ಸೂರ್ಯಭಗವತೇ ನಮಃ.

ವರ್ಷಫಲಗಳನ್ನು ಹೇಳುವ

# ಜ್ಯೋತಿಷ್ಯಮೇಷವಾಲಪ್ರ

ಈ ಪುಸ್ತಕವು ಅನೇಕ ಗ್ರಂಥಗಳ ಸಾರಸಂಗ್ರಹಿಸಿ

ಬೆಂಗಳೂರು

ಎಚ್. ಸೀತಾರಾಮಶಾಸ್ತ್ರಿಗಳವರ ತನೂಜರಾದ

ಬ್ರಹ್ಮಶ್ರೀ ಎಚ್. ಸ[illegible]ಶಾಸ್ತ್ರಿಗಳವರಿಂದ

ನೂತನವಾಗಿ ರಚಿಸಲ್ಪಟ್ಟು

ಇದರ ವಿಶಿಷ್ಟ ಹಕ್ಕನ್ನು ಪಡೆದ

ಬೆಂಗಳೂರು ಶ್ರೀರಂಗವಿಲಾಸ ಬುಕ್ ಡಿಪೋ ಏಜಂಟ್

ಬಿ. ಆರ್. ಕೃಷ್ಣಸ್ವಾಮಿಶೆಟ್ಟರವರಿಂದ

ಶ್ರೀ ಚಾಮುಂಡೇಶ್ವರೀ ಮುದ್ರಾಕ್ಷರಶಾಲೆಯಲ್ಲಿ

ಮುಖಪತ್ರವು ಮುದ್ರಿಸಲ್ಪಟ್ಟಿತು.

ಮೈಸೂರು.

೧೯೧೧

ಕ್ರಯ ೪ ಆಣೆ

ಶ್ರೀರಸ್ತು

ಜಯಸೂರ್ಯಭಗವನ್ ॥

# ವಚನಪರೀಕ್ಷಾಮಾಲ

ಎಂಬ ಗ್ರಂಥವು

ನಾಡೀಚಕ್ರಗಳ ಪ್ರಕಾರ ಸಂಚರಿಸುತಲಿರುವ ನವಗ್ರಹಗಳ ಮಾರ್ಗವನ್ನಲಂಬಿಸಿ ವರ್ಷಯೋಗವನ್ನು ಇಂಥಾಕಾಲದಲ್ಲಿ ಮಳೆಯುಬರುವುದೆಂಬುವುದನ್ನು ಗ್ರಂಥಕರ್ತನು ಈಮುಂದೆ ವಿವರಿಸುವ ರೀತಿಯೊಳು ತಿಳಿಸುತ್ತಾನ

ಪುನರ್ವಸು, ಉತ್ತರಾಷಾಢ, ರೋಹಿಣಿ, ಜ್ಯೇಷ್ಠ ಈನಾಲ್ಕು ನಕ್ಷತ್ರಗಳು ಸೂರ್ಯಸಂಬಂಧವಾದ ವಾಯುನಾಡಿಯೆಂದು ತಿಳಿಯಬೇಕು.

ಉತ್ತರ, ಉತ್ತರಾಭಾದ್ರ, ಪೂರ್ವಾಭಾದ್ರ, ಹಸ್ತ ಈನಾಲ್ಕುನಕ್ಷತ್ರಗಳು ಚಂದ್ರನ ಸಂಬಂಧವಾದ ಅಮೃತನಾಡಿಯೆಂದರಿಯತಕ್ಕದ್ದು.

ಅನೂರಾಧ,ಅಭಿಜಿತ್,ಪುಷ್ಯ,ಕೃತ್ತಿಕಾ ಈನಾಲ್ಕು ನಕ್ಷತ್ರಗಳು ಅಂಗಾರಕ ಸಂಬಂಧವಾದ ಕುಜದಹನ ನಾಡಿಎಂದು ತಿಳಿಯತಕ್ಕದು.

ಶತಭಿಷ, ರೇವತಿ, ಚಿತ್ತ, ಪುಬ್ಬ ಈ ನಕ್ಷತ್ರಗಳು ಬುಧನ ಸಂಬಂಧವಾದ ಬುಧಜಲ ನಾಡಿಯೆಂದರಿಯಬೇಕು

ಭರಣಿ, ವಿಶಾಖ, ಆಶ್ಲೇಷ, ಶ್ರವಣ, ಈ ನಕ್ಷತ್ರಗಳು ಬೃಹಸ್ಪತಿಯ ಸಂಬಂಧವಾದ ಗುರುಸೌಮ್ಯ ನಾಡಿ ಎಂಬದಾಗ ತಿಳಿಯಬೇಕು.

ಸ್ವಾತಿ, ಮಖ, ಧನಿಷ್ಠ, ಅಶ್ವಿನಿ ಈ ನಕ್ಷತ್ರಗಳು ಶುಕ್ರಸಂಬಂಧವಾದ ಶುಕ್ರನೀರನಾಡಿಯೆಂದೂಹಿಸಬೇಕು

ಮೂಲ, ಪೂರ್ವಾಷಾಢ, ಆದ್ರ್ರ, ಮೃಗಶಿರ ಈ ನಾಲ್ಕು ನಕ್ಷತ್ರಗಳು ಶನಿಗ್ರಹದ ಸಂಬಂಧವಾದ ಶನಿ ಚಂಡನಾಡಿಯೆಂದರಿಯತಕ್ಕದ್ದು

ದಕ್ಷಿಣಾಯನದೊಳು ಅಮೃತ, ನೀರ, ಜಲ ಎಂಬೀ ಮೂರುನಾಡಿಗಳಲ್ಲಿ ಸಂಚರಿಸುವ ಕ್ರೂರಗ್ರಹಗಳಾದ ಸೂರ್ಯ, ಅಂಗಾರಕ, ಶನಿ ಈ ಮೂರು ಗ್ರಹಗಳು ಸಾಮಾನ್ಯವಾಗಿ ಮಳೆಯನ್ನುಂಟುಮಾಡುವರು.

ಸೌಮ್ಯಗ್ರಹಗಳಾದ ಬುಧ, ಚಂದ್ರ, ಗುರು ಇವರುಗಳು ಅಮೃತ

ಜಲ. ನೀರ ಈ ನಾಡಿಗಳಲ್ಲಿಯೂ ಸಂಚರಿಸುವರಾದರೆ ವಿಶೇಷವಾಗಿ ವೃಷ್ಟಿಯೋಗದಾಯಕರಾಗುವರು. ಮಧ್ಯನಾಡಿಯಾದ ಸೌಮ್ಯನಾಡಿಯೊಳು ಕ್ರೂರಗ್ರಹಗಳಾದ ಶನಿ, ಸೂರ್ಯ, ಅಂಗಾರಕರು, ಸಂಚರಿಸುತ್ತಿರುವ ಸಮಯದಲ್ಲಿ ವೃಷ್ಟಿ ನಾಸ್ತಿ. ಶುಭಗ್ರಹಗಳು ಸಂಚಾರವಮಾಡುವಾಗ ಅತಿ ವೃಷ್ಟಿಯೂ ಉಂಟಾಗುತ್ತದೆ. ಮತ್ತು ವಾಯು, ದಹನ, ಪ್ರಚಂಡಗಳೆಂಬೀ ಮೂರು ನಾಡಿಗಳಲ್ಲಿ ಶುಭಗ್ರಹಗಳು ಸಂಚಾರವಮಾಡುತ್ತಿದ್ದರೆ ಅತ್ಯಲ್ಪವೃಷ್ಟಿಯೂ ಕ್ರೂರಗ್ರಹಗಳು ಸಂಚರಿಸುತಲಿದ್ದರೆ ವರ್ಷಾಭಾವವೂ ಉಂಟಾಗುವದು. ಇದಲ್ಲದೆ ಅಂಗಾರಕನಲ್ಲದ ಎಲ್ಲಾ ಗ್ರಹಗಳು ತಮ್ಮ ತಮ್ಮ ನಾಡಿಗಳಲ್ಲಿ ಸಂಚರಿಸುತಲಿರುವಾಗ ಆಯಾಯ ನಾಡಿಗಳ ಫಲವನ್ನೇ ಕೊಡುತ್ತಾರೆ. ಅಂಗಾರಕನು ಮಾತ್ರ ಸಕಲ ನಾಡಿಗಳ ಸಂಚಾರಸಮಯದಲ್ಲಿಯೂ ಶತ್ರುನಾಡಿಗಳ ಫಲವನ್ನೇ ಕೊಡುತ್ತಾನೆಂಬಾಶಯವು.

ಚಂದ್ರನಲ್ಲದೆ ಉಳಿದ ಆರುಗ್ರಹಗಳು ಅಮೃತ ನೀರ ಜಲನಾಡಿಗಳೊಳು ನಲಿಸಿದ್ದರೆ ಅತ್ಯಂತವೃಷ್ಟಿಯೂ, ಆಕಾಲದಲ್ಲಿ ಆ ಆರುಗ್ರಹಗಳೊಂದಿಗೆ ಚಂದ್ರನು ಸೇರಿದ್ದರೆ ಅಪರಿಮಿತವಾದ ವೃಷ್ಟಿಯೂ ಉಂಟಾಗುವುದು. ಚಂದ್ರನು ಶುಕ್ರನು, ಇವರು ಜಲಗ್ರಹಗಳಾದುದರಿಂದ ಜಲರಾಶಿಯಲ್ಲಾಗಲಿ, ಜಲನಾಡಿಯಲ್ಲಾಗಲಿ, ಜಲರಾಶಿಯ ಅಂಶದಲ್ಲಾಗಲಿ, ಇವರು ಸೇರಿರುವಂತಾದರೆ ವೃಷ್ಟಿಭಂಗದೋಷವು ಕಳೆದು ಸುವೃಷ್ಟಿಪ್ರದವಾಗುವುದು. ಚಂದ್ರನು, ಸೂರ್ಯನು ಜಲಗ್ರಹಗಳೆಂತಲೂ, ಬುಧನು, ಗುರುವು, ಜಲಾಶ್ರಯ ಗ್ರಹಗಳೆಂಬದಾಗಿಯೂ, ಚಂದ್ರನು, ಶುಕ್ರನು ಇವರು ಜಲಗ್ರಹಗಳೆಂಬದಾಗಿಯೂ ತಿಳಿಯಬೇಕು.

ಸೂರ್ಯನು ನಕ್ಷತ್ರಪ್ರವೇಶಕಾಲದ ಲಗ್ನಸ್ಥಿತಿಯನ್ನು ನೋಡಿ ವೃಷ್ಟಿಯೋಗವನ್ನು ತಿಳಿಯುವಿಕೆಯು. ಕರ್ಕಾಟಕ, ಮೀನ, ಮಕರ, ಈ ರಾಶಿಗಳು ಪೂರ್ಣಜಲರಾಶಿಗಳೆಂತಲೂ, ವೃಷಭ, ಸಿಂಹ, ಕುಂಭ, ಈ ರಾಶಿಗಳು ಅರ್ಧಜಲರಾಶಿಗಳೆಂಬದಾಗಿಯೂ ಮೇಷ, ತುಲಾ, ವೃಶ್ಚಿಕ, ಈ ರಾಶಿಗಳು ಪಾದಜಲರಾಶಿಗಳೆಂತಲೂ. ಮಿಥುನ, ಕನ್ಯಾ, ಧನುಸ್ಸು, ಇವುಗಳು ನಿರ್ಜಲರಾಶಿಗಳೆಂಬದಾಗಿಯೂ ಭಾವವು.

ಅಶ್ವಿನಿ, ಕೃತ್ತಿಕಾ, ರೋಹಿಣಿ, ಪೂರ್ವಾಭಾದ್ರ ಉತ್ತರಾಭಾದ್ರ, ಅನೂರಾಧ, ಶ್ರವಣ, ಪುನರ್ವಸು, ಪುಷ್ಯ ಇವು ಪುರುಷ ನಕ್ಷತ್ರಗಳೆಂತ

ಲೂ, ಭರಣಿ. ಹಸ್ತ ಚಿತ್ತಾ ಸ್ವಾತಿ, ವಿಶಾಖ ಪುಬ್ಬ ಉತ್ತರ ಆಶ್ಲೇಷ, ಮಖ, ಜ್ಯೇಷ್ಠ, ಆದ್ರ್ರ, ಧನಿಷ್ಠ, ಪೂರ್ವಾಷಾಢ, ರೇವತಿ, ಇವು ಸ್ತ್ರೀ ನಕ್ಷತ್ರಗಳೆಂತಲೂ, ಶತಭಿಷ, ಮೃಗಶಿರ. ಮೂಲ, ಈ ಮೂರು ನಕ್ಷತ್ರಗಳು ನಪುಂಸಕ ನಕ್ಷತ್ರಗಳೆಂಬುದಾಗಿಯೂ ತಿಳಿಯಬೇಕು ಸೂರ್ಯನು ಯಾವ ನಕ್ಷತ್ರವನ್ನು ಯಾವ ಕಾಲದಲ್ಲಿ ಪ್ರವೇಶಿಸುತ್ತಾನೋ ಆ ಲಗ್ನದ ರೀತಿಯಾಗಿ ಜಲರಾಶಿಗ್ರಹವಾದ ಚಂದ್ರನು ಜಲರಾಶಿಯಲ್ಲಿಯೇ ಇದ್ದುಕೊಂಡು ಆ ಲಗ್ನಕ್ಕೆ ೫-೭-೯ನೆ ಮನೆಗಳಲ್ಲಿ ಶನ್ಯಂಗಾರಕರು ಇರುತ್ತಿರಲಾಗಿ ಅಂತಾವು ಪ್ರವೇಶನಕ್ಷತ್ರದ ಮಳೆಯೊಳು ಅತ್ಯಂತವಾಗಿವೃಷ್ಟಿಯುಂಟಾಗುವದೆಂದಾಶಯವು ಮತ್ತು ಸೂರ್ಯನು ಪ್ರವೇಶಿಸುವ ನಕ್ಷತ್ರವೂ, ಆದಿನದ ನಕ್ಷತ್ರವು, ಇವೆರಡೂಪುರುಷನಕ್ಷತ್ರಗಳಾಗಿದ್ದರೆ ಅಂಥಾನಕ್ಷತ್ರ ಮಳೆಯೊಳು ದಾಹಾಧಿಕ್ಯವುಂಟಾಗುವದೆಂತಲೂ, ಅಂಥಾನಕ್ಷತ್ರಗಳು ನಪುಂಸಕಗಳಾದಲ್ಲಿ ವಿಶೇಷ ದಾಹವಾಗುವದೆಂಬದಾಗಿಯು, ಮತ್ತು ಅದೇನಕ್ಷತ್ರಗಳು ಸ್ತ್ರೀಪುರುಷ ನಕ್ಷತ್ರಗಳಾದ ಪಕ್ಷದಲ್ಲಿ ವರ್ಷಾಭಾವವೆಂಬದಾಗಿಯೂ ತಿಳಿಯಬೇಕು ಚಂದ್ರನಕ್ಷತ್ರಗಳು ೧೪ ಅವು ಯಾವವೆಂದರೆ ಅಶ್ವಿನಿ, ಭರಣಿ, ಕೃತ್ತಿಕಾ, ಶ್ರವಣ, ಧನಿಷ್ಠಾ, ರೇವತಿ, ಪುಷ್ಯ ಆಶ್ಲೇಷ, ಮಖ, ಪೂರ್ವಾಷಾಢ, ಉತ್ತರಾಷಾಢ, ಪುನರ್ವಸು, ಪೂರ್ವಾಭಾದ್ರ, ಆದ್ರ್ರ.

ಸೂರ್ಯನಕ್ಷತ್ರಗಳು ೧೩ ಅವು ಯಾವವೆಂದರೆ ಮೃಗಶಿರ, ರೋಹಿಣಿ ಪುಬ್ಬ, ಉತ್ತರ, ಹಸ್ತ ಚಿತ್ತಾ, ಸ್ವಾತಿ, ವಿಶಾಖ, ಅನೂರಾಧ, ಜ್ಯೇಷ್ಠ, ಮೂಲ, ಉತ್ತರಾಭಾದ್ರ, ಶತಭಿಷ, ಸೂರ್ಯನು ಪ್ರವೇಶಿಸುವ ನಕ್ಷತ್ರವು ಮತ್ತು ಆದಿನನಕ್ಷತ್ರವೂ ಮೇಲೆಹೇಳಿದ ಚಂದ್ರನಕ್ಷತ್ರಗಳಲ್ಲೊಂದಾದರೆ ವಿಶೇಷವಾದ ವಾಯುವು, ಅಂಥಾ ನಕ್ಷತ್ರಗಳು ಚಂದ್ರಸೂರ್ಯರ ಸಂಬಂಧವಾದವುಗಳಾದರೆ ಆ ನಕ್ಷತ್ರದ ಮಳೆಯೊಳು ಹೇರಳವಾದ ಮಳೆಯುಂಟಾಗುವದೆಂದರಿಯತಕ್ಕದ್ದು ಸೂರ್ಯನು ಪ್ರವೇಶಿಸುವ ಲಗ್ನವನ್ನನುಸರಿಸಿ ಚಂದ್ರನು ೧-೪-೫-೭-೯-೧೦ ನೆ ಸ್ಥಾನಗಳಲ್ಲಿ ನೆಲಸಿ ಜಲರಾಶಿಯೊಳಗೆ ಶುಕ್ರನು ಇರುತ್ತಾನೆ ಲಗ್ನವನ್ನ ಈಕ್ಷಿಸುತಲಿರಲು ವಿಶೇಷ ವೃಷ್ಟಿಯುಂಟಾಗುವುದು.

ಸೂರ್ಯನು ಯಾವದಿವಸ ಯಾವನಕ್ಷತ್ರದಲ್ಲಿ ಪ್ರವೇಶಿಸುವನೋ ಆ ದಿನದಲ್ಲಿ ಆ ಕಾಲಕ್ಕೆ ಸರಿಯಾಗಿ ಎಷ್ಟುಘಳಿಗೆಗಳು ಉದಯಾರಭ್ಯ ಆಗಿ

ರುವುವೋ ಅಷ್ಟುಸಂಖ್ಯೆಯನ್ನು ನಾಲ್ವರಸಂಖ್ಯೆಯಾಗಿಟ್ಟುಕೊಂಡು ಅಂತ್ಯಾಸಂಖ್ಯೆಗೆ ಆದಿನವನರಿಗೆ ಆಗುವ ತಿಥಿವಾರನಕ್ಷತ್ರ ಇವುಗಳಸಂಖ್ಯೆಯನ್ನು ಕ್ರಮವಾಗಿ ಸೇರಿಸಿ ಈಪ್ರಕಾರ ಸೇರಿಸಿದ ಒಟ್ಟುಸಂಖ್ಯೆಯನ್ನು ೬ ರಿಂದ ಗುಣಾಕಾರಮಾಡಿ ಬರುವಮೊತ್ತವನ್ನು ೪ ರಿಂದ ಭಾಗಹಾರಮಾಡಿ ಉಳಿಯುವ ಶೇಷಕ್ಕೆ ಕ್ರಮವಾಗಿ ಫಲವನ್ನು ತಿಳಿಯಬೇಕು ಹ್ಯಾಗೆಂದರೆ ೧ ಶೇಷವುಳ್ಳದಿರುವ ಮಳೆಯು. ೨ ವೃಷ್ಟಿ ಬಾಹುಳ್ಯವು, ಸಾಧಾರಣವೃಷ್ಟಿಯು. ೪ ಧಾಳಿಯೊಂದಿಗೂಡಿದ ಮಳೆಯು, ೫ ಅತಿವೃಷ್ಟಿಯು. ೬ ವೃಷ್ಟಿನಾಶವು, ೭ ಸಾಮಾನ್ಯಮಳೆಯು

ಅಂಗಾರಕ, ಬುಧ, ಸೂರ್ಯ, ಈಗ್ರಹಗಳ ಉದಯಕಾಲಗಳಿಂದ ವರ್ಷಯೋಗವನ್ನರಿಯುವಿಕೆ

ಸೂರ್ಯನು, ಅಶ್ವಿನಿ, ಭರಣಿ, ಈ ಎರಡು ನಕ್ಷತ್ರಗಳಲ್ಲಿನೆಲಸಿರುವಸಮಯದೊಳು ಜನಗಳಿಗೆಹಿತವು, ಪುನರ್ವಸು, ಮೊದಲ್ಗೊಂಡು ಹಸ್ತನಕ್ಷತ್ರಗಳವರಿವಿಗೂ ವಿಶೇಷಫಲವು ಭರಿತವು, ಕೃತ್ತಿಕಾನಕ್ಷತ್ರದಲ್ಲಿರಲುವೃಷ್ಟಿಶೂನ್ಯವೂ ರೋಹಿಣಿ, ಮೃಗಶಿರ, ಇವುಗಲ್ಲಿರಲು ಸಸ್ಯವೃದ್ಧಿಯಿಂದಕ್ಷೇಮವುಂಟಾಗುವುದು. ಅಂಗಾರಕನು, ಮೃಗಶಿರ, ಚಿತ್ತಾ ಈ ಮೂರುನಕ್ಷತ್ರಗಳಲ್ಲಿದ್ದರೆ ಅತ್ಯಂತ ಸುವೃಷ್ಟಿಯು, ಸ್ವಾತಿ,ವಿಶಾಖ ಮಘ, ಉತ್ತರಾಭಾದ್ರ ಉತ್ತರಾ, ಉತ್ತರಾಷಾಢ ಈಆರುನಕ್ಷತ್ರಗಳಲ್ಲಿರಲು ವೃಷ್ಟಿನಾಶವೂ ಸಂಭವಿಸುವದು ಬುಧನು ಆಷಾಢಮಾಸದಲ್ಲಿ ಉದಯವಾದರೆ ರಾಜಬಾಧೆಯು ಶ್ರಾವಣದಲ್ಲಿ ಚೋರಭೀತಿಯು ಪುಷ್ಯಮಾಸದಲ್ಲಿ ವರ್ಷಾಭಾವವು ವೈಶಾಖಮಾಸದಲ್ಲಿ ಪಶುಪೀಡೆವುಂಟಾಗುವುದು ಮತ್ತು ಬುಧನು ಆರ್ದ್ರಾಮೊದಲು ನಾಲ್ಕುನಕ್ಷತ್ರಗಳೊಳುಪೂರ್ವದಿಸಿಯಲ್ಲಿ ಉದಯವಾದರೆ ಅನಾವೃಷ್ಟಿಯಿಂದ ವೃಷ್ಟಿನಾಶವಾಗುವದಲ್ಲದೆ ಜನಗಳಿಗಾ ಭೀತಿಯಾಗುವುದು

ಬುಧ ಶುಕ್ರ ಇವರುಗಳ ಸಾಹಚರ್ಯದಿಂದ ವರ್ಷಯೋಗವನ್ನು ಕಾಣುವಿಕೆ

ಅಶ್ವಿನಿ- ಭರಣಿ- ಕೃತ್ತಿಕಾ- ಮೂರುನಕ್ಷತ್ರಗಳಲ್ಲಿ ಬುಧ-ಶುಕ್ರ ಈ ಎರಡುಗ್ರಹಗಳೂ ಇರುತ್ತಿರಲಾಗಿ ಹಿತಮಳೆಯು_ರೋಹಿಣಿ-ಮೃಗಶಿರ-ಆರ್ದ್ರಾ- ಈಮೂರುನಕ್ಷತ್ರಗಳಲ್ಲಿದ್ದರೆ ವೃಷ್ಟಿನಾಶವೂ-ಪುನರ್ವಸು-ಪುಷ್ಯ-ಆಶ್ಲೇಷ- ಈಮೂರು ನಕ್ಷತ್ರಗಳಲ್ಲಿದ್ದರೆ ವಿಶೇಷವೃಷ್ಟಿಯು- ಮಘ-ಪುಬ್ಬ-ಉತ್ತರ-ಹಸ್ತ- ಚಿತ್ತಾ-ಸ್ವಾತಿ-ವಿಶಾಖಾ-ಈ ನಕ್ಷತ್ರಗಳ

ಲ್ಲಿದ್ದರೆ ವೃಷ್ಟಿ ಬಾಹುಳ್ಯವು ಅನೂರಾದ-ಜ್ಯೇಷ್ಠ-ಮೂಲ-ಪೂರ್ವಾಷಾಢ ಉತ್ತರಾಷಾಢ-ಶ್ರವಣ-ಧನಿಷ್ಠ-ಶತಭಿಷತ್-ಪೂರ್ವಾಭಾದ್ರ-ಈ ನಕ್ಷತ್ರ ಗಳಲ್ಲಿದ್ದರೆ ವರ್ಷಾಭಾವವೂ, ಉತ್ತರಾಭಾದ್ರ ರೇವತಿ ಯೀನಕ್ಷತ್ರಗ ಳೊಳಿರಲು ಅತ್ಯಂತವರ್ಷವೂ ದೇಶದಲ್ಲುಂಟಾಗುವುದು

—*(ಆರ್ದ್ರಾನಕ್ಷತ್ರದಲ್ಲಿ ಮೇಘವು ಗರ್ಜಿಸಿದಫಲವು)*—

ಸೂರ್ಯನುಆರ್ದ್ರಾನಕ್ಷತ್ರವನ್ನು ಪ್ರವೇಶಿಸಿದರೆ ಆ ನಕ್ಷತ್ರದ ಪ್ರಥ ಮಪಾದದಲ್ಲಿಮೇಘವು ಗರ್ಜಿಸಲು ಮಳೆಯುನಾಶವಾಗುವದು. ಎರಡನೆ ಯಪಾದದಲ್ಲಿ ಗರ್ಜಿಸಲು ವೃಷ್ಟಿನಾಶವೂ. ಮೂರನೆಯಪಾದದಲ್ಲಿ, ಫಲ ನಾಶವೂ ನಾಲ್ಕನೆಯಪಾದದಲ್ಲಿ ಅತಿವೃಷ್ಟಿಯಿಂದ ವಿಶೇಷಫಲವು ಉಂ ಟಾಗುವದು ಅರ್ದ್ರಾನಕ್ಷತ್ರವು ಶುಭವಾರಗಳಲ್ಲಿ ಪ್ರವೇಶಿಸಿದರೆ ಸಸ್ಯದ ಅಭಿವೃದ್ಧಿಯು, ಪಾಪಗ್ರಹ ವಾರಗಳಲ್ಲಿಯಾದರೆ ಪ್ರಪಂಚದಲ್ಲೆಲ್ಲಾ ವ ರ್ಷಾಭಾವವು ಸಂಭವಿಸುವುದು ಸೂರ್ಯನು ಮಘಾನಕ್ಷತ್ರದಲ್ಲಿ ಪ್ರವೇಶಿ ಸಿದಕಾಲದಲ್ಲಿ ಸೂಕ್ಷ್ಮವಾಗಿ ತುಷಾರವೃಷ್ಟಿ ಯುಂಟಾಗಲು ಎರಡುಮಾ ಸಗಳ ಪರ್ಯಂತರವು ವೃಷ್ಟಿನಾಶವಾಗುವುದು, ಆರ್ದ್ರಾನಕ್ಷತ್ರ ಪ್ರವೇಶ ಕಾಲದೊಳು ಸ್ವಲ್ಪವಾಗಿ ಮಳೆಯು ಬಂದರೆ ಮೇಲಿನಂತೆಯೆ ಅರವತ್ತು ದಿವಸಗಳು ಮಳೆಯು ನಾಶವಾಗುವುದು. ಮೃಗಶಿರಾ ನಕ್ಷತ್ರದಲ್ಲಿಯು. ಮಘಾನಕ್ಷತ್ರದಲ್ಲಿಯು ಸೂರ್ಯನು ಪ್ರವೇಶಿಸಿರುವಾಗ ಮೇಘವು ಗರ್ಜಿಸಿದ ರೆ ಅತಿವೃಷ್ಟಿಯುಂಟಾಗುತ್ತದೆ

—*(ಶುಕ್ರೋದಯಾಸ್ತಮಯಗಲ್ಲಿ ವರ್ಷಯೋಗವು.)*—

ಶುಕ್ರನು ಕೃಷ್ಣಪಕ್ಷದಲ್ಲಿನ ಅಷ್ಟಮಿ, ಚತುರ್ದಶಿ, ಅಮಾವಾ ಸ್ಯಾ ಈದಿನಗಳಲ್ಲಿ ಉದಯ, ಅಸ್ತಗಳುಳ್ಳವನ್ನಾಗಲು ವಿಶೇಷ ವರ್ಷವಾ ಗುವುದು ಮತ್ತು ಈಮುಂದೆಹೇಳುವ ಮಾಸಗಳಲ್ಲಿ ಉದಯಾಸ್ತವಾದ ರ ಕ್ರಮವಾದಫಲಗಳುಂಟಾಗುವುವು ಹೇಗಂದರೆ ಚೈತ್ರದಲ್ಲಿಸುಭಿಕ್ಷವು ವೈಶಾಖದಲ್ಲಿ ನಾಶವು-ಜ್ಯೇಷ್ಠದಲ್ಲಿ ಅತಿವೃಷ್ಟಿಯು, ಆಷಾಢದಲ್ಲಿ ವೃಷ್ಟಿನಾಶವು ಶ್ರಾವಣದಲ್ಲಿ ಭಾದ್ರಪದಗಳಲ್ಲಿ ಭೂಮಿಯುಗರ್ಜನವು ಆಶ್ವೀಜ ಕಾರ್ತಿಕಗಳಲ್ಲಿ ಕ್ಷಾಮಪೀಡೆಯು, ಪುಷ್ಯ, ಮಾಘಗಳಲ್ಲಿ ಸುಭಿ ಕ್ಷವು, ಫಾಲ್ಗುಣಮಾಸದಲ್ಲಿ ಅರ್ಘವೃದ್ಧಿಯು ಉಂಟಾಗುವದು, ಶುಕ್ರನು ಭರಣಿ, ಕೃತ್ತಿಕಾ, ರೋಹಿಣಿ, ಮೃಗಶಿರ, ಆರ್ದ್ರಾ ಈನಕ್ಷತ್ರಗಳಲ್ಲಿ ಪು ದಯಾಸ್ತನಾದರೆ ಪಶುಗಳಿಗೆ ತೊಂದರೆಯು, ದೇಶಸೌಖ್ಯವು, ಆರ್ದ್ರಾ, ಪು

ನರ್ವ್ಯಸು ಪುಷ್ಯ, ಆಶ್ಲೇಷ ಇವುಗಳಲ್ಲಿ ಪಲಭರಿತವು, ಜ್ಯೇಷ್ಠ ಮೂಲ ಪೂ ರ್ವ್ಯಾಷಾಢ ಉತ್ತರಾಷಾಢ, ಶ್ರವಣಯಿವುಗಳಲ್ಲಿ ರೋಗೋಪದ್ರವವು ಆ ಸ್ಪವೃಷ್ಟಿಯೂ ಧನಿಷ್ಠ, ಶತಭಿಷ, ಪೂರ್ವಾಭಾದ್ರ, ಉತ್ತರಾಭಾದ್ರ, ರೇವತಿ ಅಶ್ವಿನಿಯಿವುಗಳಲ್ಲಿ ವಿಶೇಷವೃಷ್ಟಿಯೂ ಸಂಭವಿಸುವುದು ಶುಕ್ರನು, ಸ್ವಾತಿ, ವಿಶಾಖ, ಅನೂರಾಧ. ಈನಕ್ಷತ್ರಗತನಾಗಿ ಪೂರ್ವದಿಕ್ಕಿನಲ್ಲಿದ್ದರೆ ಅನಾ ವೃಷ್ಟಿಯೂ, ಮಘ ಪುಬ್ಬ, ಉತ್ತರ, ಹಸ್ತ, ಚಿತ್ತಾ ಈನಕ್ಷತ್ರಗತನಾಗಿ ರಲು ವಿಶೇಷವೃಷ್ಟಿಯೂ, ಪಶ್ಚಿಮದಿಕ್ಕಿನಲ್ಲಿ ಸ್ವಾತಿ, ವಿಶಾಖಾ, ಅನೂರಾಧ ಈನಕ್ಷತ್ರಗಳನ್ನು ಹೊಂದಿರಲು ಅತಿವೃಷ್ಟಿಯೂ, ಮಘ, ಪುಬ್ಬ, ಉತ್ತರ ಹಸ್ತ- ಚಿತ್ತ ಯಿವುಗಳಲ್ಲಿರಲು ಅನಾವೃಷ್ಟಿಯೂ ಉಂಟಾಗುವುದು ಸೂರ್ಯನು ಯಾವರಾಶಿಯನ್ನು ಸೇರಿರುವನೋ ಆರಾಶಿಗೆ ಎರಡನೆಸ್ಥಾನ ವಾದರಾಶಿಯು ಪೂರ್ವವೆಂಬದಾಗಿಯೂ, ಆಸೂರ್ಯನಿರುವರಾಶಿಗೆ ಮಧ್ಯರಾ ಶಿಯೆಂಬದಾಗಿಯೂ ತಿಳಿಯಬೇಕು ಶುಕ್ರನು ಮಘ, ಸ್ವಾತಿ- ಈಎರಡು ನಕ್ಷತ್ರಗಳನ್ನು ಸೇರಿರುವಾಗ ಆನಕ್ಷತ್ರರಾಶಿಯು ಸೂರ್ಯನಿಗೆ ಎರಡನಯ ರಾಶಿಯಾಗಿದ್ದರೆ ಅತಿವೃಷ್ಟಿಯೆಂತಲೂ- ಮತ್ತು ಹೇಳಲ್ಪಟ್ಟ ನಕ್ಷತ್ರಗತ ನಾಗಿ ಆನವಾರ್ಕ್ಯಸ್ಥಿತರಾಶಿಗೆ ಹಿಂದಿನರಾಶಿಯೋಳಿದ್ದರೆ ವೃಷ್ಟಿಪ್ರತಿಬಂಧ ಕವೆಂಬದಾಗಿಯೂ ತಿಳಿಯಬೇಕು

—( ರಕ್ತ ಪ್ರ ವಾ ಹ ಕಾ ಲ ವು )—

ಜ್ಯೇಷ್ಠ, ಆಷಾಢ, ಶ್ರಾವಣ ಈ ತಿಂಗಳುಗಳಲ್ಲಿಯೂ, ಕಾರ್ತೀಕ, ಫಾಲ್ಗುನ ಮಾಸಗಳ ಶುಕ್ಲಪಕ್ಷದಲ್ಲಿಯೂ ಶುಕ್ರನು ಅಸ್ತಂಗತನಾದರೆ ರಕ್ತಪ್ರವಾಹ ವುಂಟಾಗುವುದು

—( ಗ್ರಹಗಳು ದಿಗ್ಗತರಾಗಿರಲು ವೃಷ್ಟಿಯೋಗವು )—

ಪಶ್ಚಿಮದಲ್ಲಿ ಶುಕ್ರನು, ಸೂರ್ಯನು ಮಧ್ಯದಲ್ಲಿಯೂ, ಶನಿಯೂ ಪೂ ರ್ವದಲ್ಲಿಯೂ ಯಿರಲಾಗಿ ವರ್ಗಶೂನ್ಯವಾಗುದೆಂತಲೂ, ಮತ್ತು ಅರ್ಘವೃದ್ಧಿ ಯೆಂಬವಾಗಿಯೂ ಪಶ್ಚಿಮದಲ್ಲಿ ಶುಕ್ರನು, ಬುಧನು ಮಧ್ಯಮದಲ್ಲಿಯೂ, ಸೂರ್ಯನು ಪೂರ್ವದಲ್ಲಿಯೂ ಯಿರಲು ವಿಶೇಷವಾದ ಮಳೆಯಿಂದ ಸುಭಿಕ್ಷ ವಾಗುವುದೆಂತಲೂ, ಬೃಹಸ್ಪತಿಯು ಪಶ್ಚಿಮದಲ್ಲಿಯೂ, ಸೂರ್ಯ, ಬುಧರು ಮಧ್ಯಮದಲ್ಲಿಯೂ, ಪೂರ್ವದಿಕ್ಕಿನಲ್ಲಿ ಶುಕ್ರನು ಯಿದ್ದರೆ ವಿಶೇಷವಾಗಿ ಮ ಳೆಯುಂಟಾಗಿ ತನ್ಮೂಲಕ ಸುಭಿಕ್ಷವೂ, ಆರೋಗ್ಯವೂ ಉಂಟಾಗುವು ದೆಂತಲೂ, ಪೂರ್ವದಲ್ಲಿ ಸೂರ್ಯನು ಶುಕ್ರನು ಇರುತ್ತಾ ಮಧ್ಯಮದಲ್ಲಿ ಬು

ಧನಿದ್ದರೆ ಅತ್ಯಲ್ಪನಾದ ಚಂಡವೃಷ್ಟಿಯಿಂದ ಫಲನಾಶವಾಗುವುದೆಂತಲೂ ತಿಳಿಯಬೇಕು.

## ಮೇಘಗಳ ಘರ್ಜನದಿಂದಲೂ, ಗ್ರಹಗಳ ಸಂಬಂಧದಿಂದಲೂ ಸಂಭವಿಸುವ ಫಲಗಳು

ಸೂರ್ಯನು ಮಖಾನಕ್ಷತ್ರವನ್ನು ಸೇರುವಕಾಲದಲ್ಲಿ ಸ್ವಲ್ಪವಾಗಿಮಳೆಯು ಬಂದರೆ ಅಲ್ಲಿಂದ ಮುಂದೆ ಪದಡು ತಿಂಗಳವರೆವಿಗೂ ವೃಷ್ಟಿನಾಶವಾಗುವದಂತಲೂ, ಆರ್ದ್ರಾ ಪ್ರವೇಶಕಾಲದೊಳು ಅದೇ ರೀತಿಯಾದರ ಅಂದರ ಭಿನ್ನಿಸಿದರೆ ಮಳೆಯು ಹೋಗುವುದೆಂತೂ, ರೇವತೀ ನಕ್ಷತ್ರವಲ್ಲಿ ಸೂರ್ಯನು ಸೇರಿದಕಾಲದಲ್ಲಿ ಕೊಂಚಮಳೆಬರಲು ಅಲ್ಲಿಂದ ಆರುಮಾಸಗಳ ಪರ್ಯಂತರವು ವೃಷ್ಟಿಶೂನ್ಯವಾಗುವುದೆಂದು ತಿಳಿಯಬೇಕು. ಸೂರ್ಯನು ಸ್ವಾತೀನಕ್ಷತ್ರದಲ್ಲಿರುವಾಗ ವಿಶೇಷವಾಗಿ ಮಿಂಚಿದರೂ, ಮಖಾದಲ್ಲಿರುವಲ್ಲಿ ಗುಡಿಸಿದರೂ, ಮೃಗಶಿರಾನಕ್ಷತ್ರದಲ್ಲಿರುವಾಗ ಮಳೆಯು ವುಂಟಾಗುವುದು ಸೂರ್ಯಗ್ರಹಕ್ಕೆ ಪೂರ್ವಭಾಗದಲ್ಲಿ ಬುಧನಿದ್ದರೆ ವಿಶೇಷಘಳಿಯೂ, ಶನಿಯಿದ್ದರ ವೃಷ್ಟಿನಾಶವೂ, ಶುಕ್ರನಿದ್ದರೆ ವಿಶೇಷವರ್ಷವೂ, ಅಂಗಾರಕನಿರುತ್ತಿರಲು ಅನಾವೃಷ್ಟಿಯು ಸಂಭವಿಸುವುದು. ಶುಕ್ರನು ಉದಯವಾಗುವ ಕಾಲದೊಳಗೂ, ಬೃಹಸ್ಪತಿಯು ಅಸ್ತನಾಗುವ ಸಮಯದಲ್ಲಿಯೂ ಅಂಗಾರಕನು ತಾನಿರುವನಕ್ಷತ್ರದಿಂದ ಮತ್ತೊಂದು ನಕ್ಷತ್ರಕ್ಕೆ ಚಲಿಸುವಾಗಲೂ ವೃಷ್ಟಿಯೋಗವುಂಟಾಗುವುದು. ಶನ್ಯಂಗಾರಕ ಉದಯಕಾಲಗಳಲ್ಲಿ ವೃಷ್ಟಿಯೋಗವಿಲ್ಲವೆಂಬ ತಾತ್ಪರ್ಯವು.

ಶುಕ್ರನಿರುವ ಸ್ಥಾನಕ್ಕೆ ಏಳನಯರಾಶಿಯಲ್ಲಿ ಚಂದ್ರಸೂರ್ಯರಿರುತ್ತಾರೆ ಆ ಸಮಯದಲ್ಲಿ ಗುರುವು ಬಂದು ಸೇರುವುದಾದರೆ ವಿಶೇಷಮಳೆಯುಂಟಾಗುವುದೆಂತಲೂ, ಆ ಶುಕ್ರನಿರುವ ಸ್ಥಾನಕ್ಕೆ ಮುಂಭಾಗದಲ್ಲಿ ಅಂಗಾರಕ, ಶನಿ, ಬುಧ,ಗುರು ಇವರುಗಳಿದ್ದರೆ ವರ್ಷಾಭಾವದಿಂದ ಕ್ಷಾಮಪೀಡೆಯುಂಟಾಗುವುದೆಂದಾಶಯವು ಸೂರ್ಯ, ಅಂಗಾರಕ, ಶನಿ ಈ ಗ್ರಹಗಳ ಮಧ್ಯದೊಳು ಬುಧ, ಶುಕ್ರರು ಸೇರಿರುವಾಗ ವರ್ಷಾಭಾವವೂ, ಸೂರ್ಯನಿಗ ಸಮೀಪದಲ್ಲಿಯೂ, ಪೂರ್ವಪಶ್ಚಿಮದಲ್ಲಿಯೂ ಚಂದ್ರಸಹಿತವಾದ ಎಲ್ಲಾ ಗ್ರಹಗಳು ಇದ್ದರೆ ವಿಶೇಷವಾಗಿ ವರ್ಷಿಸುವುದೆಂತಲೂ ಭಾವವು.

ಶುಕ್ರನಿಗೂ-ಬುಧನಿಗೂ- ಪೂರ್ವಾಭಾದ್ರ-ಉತ್ತರಾಭಾದ್ರ-ರೇವತಿ-

ಅಶ್ವಿನಿ-ಭರಣಿ ಈ ನಕ್ಷತ್ರಗಳಲ್ಲಿಯು, ಪುನರ್ವಸು-ಪುಷ್ಯ-ಆಶ್ಲೇಷ-ಮಖ-ಉಬ್ಬ-ಉತ್ತರ-ಹಸ್ತ-ಚಿತ್ತ-ಸ್ವಾತಿ ಈ ನಕ್ಷತ್ರಗಳೊಳಗೂ ಸಂಬಂಧವುಂಟಾದ ಕಾಲವಲ್ಲಿ ವಿಶೇಷವರ್ಷವಾಗುವುದೆಂತಲೂ ಒಂದೇ ನಾಡಿಯಲ್ಲಿ ಅಂಗಾರಕ- ಚಂದ್ರರು- ಬೃಹಸ್ಪತಿಯೊಡನೆ ಕೂಡಿದ್ದರೆ ಅತಿವೃಷ್ಟಿಯೆಂಬದಾಗಿಯೂ ಅರಿಯತಕ್ಕದ್ದು

ಬೃಹಸ್ಪತಿಯು ಶುಕ್ರ ಶನಿ ಈ ಗ್ರಹಗಳಿಗೆ ಹಿಂಭಾಗದಲ್ಲಿ ಬುಧನು ನೆಲಸಿರುವಾಗ ರೋಗಾಧಿಕ್ಯವು ಅತಿವೃಷ್ಟಿಯೂ ಸಸ್ಯನಾಶವು ಉಂಟಾಗುವುದು ಬುಧನು ಶುಕ್ರನು ಈ ಎರಡು ಗ್ರಹಗಳು ವಕ್ರಶೀಘ್ರಗತಿಗಳಿಂದರುತ್ತಾ ಏಕರಾಶಿಸ್ಥಾಯಿಗಳಾದರೆ ಅತಿ ವೃಷ್ಟಿಯಿಂದ ಜಲಪ್ರಳಯವಾಗುವುದು ಬುಧನು ಶುಕ್ರನು ಒಬ್ಬರಿಗೊಬ್ಬರು ಸಮೀಪವರ್ತಿಗಳಾದರೆ ಅತಿವೃಷ್ಟಿಯು, ಇವರ ಮಧ್ಯದಲ್ಲಿ ಸೂರ್ಯನು ಸೇರಿದವನಾದರೆ ವೃಷ್ಟಿನಾಶನವೂ ಉಂಟಾಗುವುದು.

—( ಕಾಲಸರ್ಪಯೋಗವು )—

ಮೀನರಾಶಿಯಲ್ಲಿ ಶನಿಯು, ಕನ್ಯೆಯಲ್ಲಿ ಬೃಹಸ್ಪತಿಯು, ಇದ್ದರೆ ಯುದ್ಧಭಯವು ಸಂಭವಿಸುವದೆಂತಲೂ, ಬೃಹಸ್ಪತಿಯು, ಮಿಥುನ, ಸಿಂಹ, ಮಕರ ಈರಾಶಿಗಳಲ್ಲಿದ್ದರ ಅತ್ಯಲ್ಪವೃಷ್ಟಿಯಿಂದ ಪ್ರಜೆಗಳಿಗೆ ಅನಾರೋಗ್ಯವುಂಟಾಗುವುದೆಂಬದಾಗಿಯೂ, ಶನ್ಯಂಗಾರಕ ಗುರುಗಳು ಪರಸ್ಪರ ಏಳನೆಯಸ್ಥಾನಗಳಲ್ಲಾಗಲಿ ಅಥವಾ ಒಂದೇ ರಾಶಿಯಲ್ಲಾಗಲಿ ಇರುತ್ತಿದ್ದರೆ ದುರ್ಭಿಕ್ಷಬಾಧೆಯಿಂದ ರಣಭೀತಿಯಾಗುವದೆಂತಲೂ, ಬೃಹಸ್ಪತಿಯು ಶನಿಯು ಇವರಿಬ್ಬರೂ ವೃಷಭ, ಸಿಂಹರಾಶಿಗಳ ಮಧ್ಯದಲ್ಲಿಯೂ, ಮೀನ, ವೃಶ್ಚಿಕಗಳ, ಅಂತ್ಯದಲ್ಲಿಯೂ, ಸೇರಿರುವಾಗ ಫಲಶೂನ್ಯದಿಂದ ದುರ್ಭಿಕ್ಷವಾಗುವುದೆಂತಲೂ ಗುರು, ರಾಹುಗಳು ಒಂದೇರಾಶಿಯಲ್ಲಿ ಸೇರಿರುವಾಗಲೂ, ಶನಿ, ಶುಕ್ರ, ಸೂರ್ಯರು ಏಕಸ್ಥಾನದಲ್ಲಿಯೂ, ಇದ್ದರೆ ಯುದ್ಧಭಯವೂ, ರಾಜಕಲಹವೂ ಉಂಟಾಗುವದೆಂತಲೂ ಯಾವದಾದರೂ ಐದುಗ್ರಹಗಳಹಿಂದೆ ಕೇತುವು ಇರುತ್ತಾ,ಮುಂದೆ ರಾಹುವು ನೆಲಸಿದ್ದರೆ ಕಾಲಸರ್ಪಯೋಗವೆಂಬದಾಗಿಯೂ ತಿಳಿಯಬೇಕೆಂಬ ಭಾವವು

—(ಸಿಂಹಂಗಾರಕದೋಷವು )—

ಸಿಹ್ಮರಾಶಿಯಲ್ಲಿಯಾದರೂ ಅಥವಾ ಅದರ ಅಂಶದಲ್ಲಾಗಲಿ ಕುಜನು ಇದ್ದರ ಪ್ರಪಂಚಕ್ಕಲ್ಲಾ ಕೇಡು ಸಂಭವಿಸುವುದು

ಬುಧ, ಶುಕ್ರ, ಸೂರ್ಯ, ಇವರುಗಳೊಡನೆ ಅಂಗಾರಕನು ಸೇರಿ ಸಿಹ್ಮರಾಶಿ ಗತನಾಗಿದ್ದರೆ ತತ್ಕಾಲದಲ್ಲಿ ಆ ದೋಷವು ಸಂಭವಿಸುವದಿಲ್ಲವು

ಅಂಗಾರಕನು, ಶುಕ್ರ, ಸೂರ್ಯರ ಮಧ್ಯಗತನಾಗಿ ಸಿಂಹರಾಶಿಯೊಳಿದ್ದರೆ ವಿಶೇಷವರ್ಷವುಂಟಾಗಿ ಸಿಹ್ಮಂಗಾರಕದೋಷವು ನಾಶವಾಗುವುದು

ಗುರುವು, ಶನಿಯು, ಈರ್ವರು ಯಾವ ರಾಶಿಯಾಲ್ಲಾಗಲಿ ಸಂಭಂಧವುಳ್ಳವರಾಗಿದ್ದರೆ ಅಂಥಾ ಸಂಬಂಧಕಾಲದಿಂದ ಮೂರುವರ್ಷಗಳು ದೇಶದಲ್ಲೆಲ್ಲಾ ಅನೇಕ ವಿಧವಾದ ಉಪದ್ರಗಳುಂಟಾಗುವುವು

—(ವಕ್ರಗ್ರಹಗಳ ಫಲವು)—

ಶನಿಯು, ಶುಕ್ರನು ಈ ಎರಡು ಗ್ರಹಗಳೂ ವಕ್ರಗತಿಯುಳ್ಳವರಾಗಿ ಮೇಷ, ವೃಷಭ, ಸಿಂಹ,ವೃಶ್ಚಿಕ, ಧನುಸ್ಸು, ಮೀನ ಈರಾಶಿಗಳಲ್ಲಿದ್ದರೆ ವೃಷ್ಟಿನಾಶವಾಗಿ ಪ್ರಜಾನಷ್ಟವಾಗುವುದು

ಗುರು, ಶುಕ್ರ, ಶನಿ, ಅಂಗಾರಕ ಈ ಗ್ರಹಗಳಲ್ಲಿ ಯಾರಾದರೂ ಓರ್ವರು ಚಂದ್ರನ ಪರಿವೇಷ ಮಧ್ಯದಲ್ಲಿ ಸೇರಿರುವರಾದರೆ ರಾಜಕಳಹಗಳುಂಟಾಗುವುವು

ಶನ್ಯಂಗಾರಕರು ರೋಹಿಣಿ ನಕ್ಷತ್ರಮಂಡಲದಲ್ಲಿದ್ದರೆ ವೃಷ್ಟ್ಯಭಾವದಿಂದ ಫಲನಾಶವೂ, ಪ್ರಜಾನಷ್ಟವೂ ಸಂಭವಿಸುವುದು

ವಕ್ರಗತಿಯಿಂದಿರುವ ಶನ್ಯಂಗಾರಕರು ವೃಷಭ, ಸಿಂಹ, ವೃಶ್ಚಿಕ, ಮೀನ, ಈ ನಾಲ್ಕುರಾಶಿಗಳಲ್ಲಿ ನೆಲಸಿದ್ದರೆ ವರ್ಷಾಭಾವವೂ ರೋಗಪೀಡೆಯೂ, ಸಸ್ಯನಾಶವೂ, ಪ್ರಜಾಕಲಹವೂ ಸಂಭವಿಸುವುವು.

ಜ್ಯೇಷ್ಠ, ಆಷಾಢ, ಶ್ರಾವಣ ಈ ಮೂರುತಿಂಗಳುಗಳಲ್ಲಿಯೂ ಶುಕ್ರನು ವಕ್ರಗತಿಯುಳ್ಳವನಾದರೆ ರಾಜಪೀಡೆಯುಂಟಾಗುವುದು

ಬೃಹಸ್ಪತಿಯು ಪೂರ್ವದಲ್ಲಿಯು ಪಶ್ಚಿಮದಲ್ಲಿ ಶುಕ್ರನು ಅನ್ಯೋನ್ಯವಾಗಿ ಸಮಸಪ್ತಕದಲ್ಲಿದ್ದರೆ ತಸ್ಕರಪೀಡೆಯು, ರೋಗಪೀಡೆಯು, ಪರಸ್ಪರಯುದ್ಧವೂ ಸಂಭವಿಸುವವು

ಪೂರ್ವದಿಕ್ಕಿನಲ್ಲಿ ಬೃಹಸ್ಪತಿಯಿರುವಾಗ ಸ್ವಾತೀನಕ್ಷತ್ರಗತನಾದ ಶುಕ್ರನು ಬುಧನಿಂದೊಡಗೂಡಿರಲು ಅತ್ಯಂತ ಮಳೆಯುಂಟಾಗುವುದು

ಪಶ್ಚಿಮದಲ್ಲಿ ಬೃಹಸ್ಪತಿ ಇರುವಲ್ಲಿ ಶುಕ್ರನು ಮಘಾನಕ್ಷತ್ರವನ್ನು ಹೊಂದಿದ್ದರೆ ವಿಶೇಷವಾಗಿ ವರ್ಷಿಸುವುದು.

—(ಸೂರ್ಯಚಂದ್ರರ ಗಿರಿವೇಶಫಲವು)—

ಹಗಲು, ಮತ್ತು ರಾತ್ರಿ ಈಸಮಯಗಳಲ್ಲಿ ಸೂರ್ಯ, ಚಂದ್ರರ ಪರಿವೇಷಗಳು ಪ್ರಥಮಯಾಮದಲ್ಲಿ ವುಂಟಾದರ ಅರಸಿಗು ಪ್ರಜೆಗಳಿಗು ಬಾಧೆಯುಂಟಾಗುವುದೆಂತಲೂ, ಎರಡನ ಯಾಮದೊಳಾಗಲು ಅತಿವೃಷ್ಟಿಪ್ರದವೆಂಬದಾಗಿಯು, ಮೂರನೆಯ ಯಾಮದೊಳಾಗಲು ಅತಿವೃಷ್ಟಿಯಿಂದಸುಭಿಕ್ಷವಂತಲು, ನಾಲ್ಕನೆಯ ಯಾಮದೊಳಾದರ ಪ್ರಜಾನಷ್ಟವಾಗುವದೆಂಬದಾಗಿಯೂ ತಿಳಿಯಬೇಕು.

ಯಾವಮಾಸಗಳಲ್ಲಿಯೇಆಗಲಿ ಶುಕ್ಲಪಕ್ಷದಪ್ರತಿಪಕ್ಪ್ರಭೃತಿಪಂಚಮಿಯುವರಿವಿಗೂ ಪ್ರತಿದಿನವೂ ತಪ್ಪದೆಯೇ ಸೂರ್ಯಚಂದ್ರದಪರಿವೇಷಗಳು ಯಾವಯಾಮಗಳಲ್ಲಿಯೇ ಆದರು ಬ್ರಾಹ್ಮಣರಿಗೆ ಪೀಡೆಯು, ಕ್ಷತ್ರಿಯರಿಗ ಮಂಗಳವೂ ಅಷ್ಟಮಿಯಿಂದ ದ್ವಾದಶಿಯುವರಿವಿಗೆ ಆಗಲು ಅನ್ಯೋನ್ಯ ರಾಜಕಲಹವು, ತ್ರಯೋದಶಿಯುಮೊದಲ್ಗಾಗಲು ಚತುರಂಗಕ್ಷಯವೂ, ಚತುರ್ದಶಿಯಲ್ಲಿ ರಾಜಭಾರ್ಯೆಗತ್ತೊಂದರೆಯೂ, ಪೌರ್ಣಮಾಸ್ಯೆಯೊಳು ಆರೋಗ್ಯವೂ ಸಂಭವಿಸುವುದು

ಶ್ರಾವಣ, ಭಾದ್ರಪದಮಾಸಗಳಲ್ಲಿಯೂ ಆಶ್ವಿಜ, ಕಾರ್ತೀಕಮಾಸಗಳಲ್ಲಿಯೂ, ಚಂದ್ರಸೂರ್ಯರಪರಿವೇಷಗಳು ಸುಭಿಕ್ಷದಿಂದಕ್ಷಮವನ್ನುಟುಮಾಡುವುವು. ಮತ್ತು ವಿಶೇಷವಾಗಿ ವರ್ಷಯೋಗವೂ ವುಂಟಾಗುತದೆಈ ಹೇಳಿದಮಾಸಗಳಲ್ಲದೆ ಉಳಿದಮಾಸಗಳಲ್ಲಾದರೆ ಆಯಾ ಋತುಕುಫಲಗಳುಂಟಾಗುವುವಲ್ಲದ ರೋಗಪೀಡೆಯೂ ಸಂಭವಿಸುವುದು

ಚಂದ್ರಸೂರ್ಯರ ಪರಿವೇಷಗಳು ಹದಿನೈದುದಿವಸಗಳ ಪರ್ಯಂತರವಾಗಲಿ ಅಥವಾ ಏಳೂವರದಿವಸಗಳ ಪರ್ಯಂತರವಾಗಲಿ ಪ್ರತಿದಿನವೂ ತಪ್ಪದೆ ವುಂಟಾದರ ಸಕಲದೇಶದ ಅರಸರೂ ಲಯವನ್ನೈದುವರು

ಪರಿವೇಷಗಳು ಏಕಕಾಲವಲ್ಲಿ ಎರಡಾದರೆ ಸೇನಗೆ ನಾಶನವೂ, ಮೂರ ಪರಿವೇಷಗಳಾದರ ಅವನರುಗಳಿಗ ಬಾಧೆಯೂ, ನಾಲ್ಕುಪರಿವೇಶಗಳಾಗಲು ಸರ್ವನಾಶವೂ ಸಂಭವಿಸುವುದು

ಶನಿಯು ಸೂರ್ಯಚಂದ್ರರ ಪರಿವೇಶಗಳ ಮಧ್ಯದಲ್ಲಿರಲು ಸಾಮಾನ್ಯಧಾನ್ಯಗಳು ನಾಶವಾಗುವುದು ಅಂಗಾರಕನು ಮಧ್ಯದಲ್ಲಿದ್ದರೆ ರಾಜೋಪದ್ರವವೂ, ಬೃಹಸ್ಪತಿಯಿದ್ದರೆ ರೋಗಪೀಡೆಯು, ಬುಧನಿರಲು ಫಲನಾಶವು, ಶುಕ್ರನಿದ್ದರ ರಾಜಕಲಹವು, ರಾಹು ನಲಸಿರಲು ಸ್ತ್ರೀಗರ್ಭನಾಶವೂ ವುಂಟಾಗುವುದು.

ಚಂದ್ರಸೂರ್ಯರಪರಿವೇಷಗಳ ಮಧ್ಯದಲ್ಲಿ ಎರಡು ಗ್ರಹಗಳಿದ್ದರೆ ರಾಜಕಲಹವು, ಮೂರುಗ್ರಹಗಳಿರಲ ಕ್ಷಾಮಪೀಡೆಯು, ನಾಲ್ಕುಗ್ರಹಗಳಿದ್ದರೆಪ್ರಭುಲಯವು, ಐದುಗ್ರಹಗಳಿರುತ್ತಿರಲು ದೇಶಪ್ರಳಯವು ಉಂಟಾಗುವುದು

ಚಂದ್ರನು, ಬೃಹಸ್ಪತಿಯು, ಶುಭಗ್ರಹಗಳು ತಮ್ಮ ತಮ್ಮ ಸ್ವಕ್ಷೇತ್ರಗಳಲ್ಲಾಗಲಿ, ಮೂಲ ತ್ರಿಕೋಣ ರಾಶಿಗಳೊಳಾದರೂ, ಇರುವುದಾದರೆ ಪರಿವೇಷದೋಷಗಳನ್ನು ನಿವಾರಿಸುವುದು

ಆಷಾಢಮಾಸದಲ್ಲಿ ಕೃತ್ತಿಕ ಆದ್ರಾ ಮೃಗಶಿರ ಪುಬ್ಬ, ಮೃಗಶಿರ ಈನಕ್ಷತ್ರಗಳಲ್ಲಿ ಚಂದ್ರ, ಸೂರ್ಯರ ಪರಿವೇಷಗಳಾದರೆ ಅತಿವೃಷ್ಟಿಯುಂಟಾಗುವುದು ಈಕೃಷ್ಣಪಕ್ಷದಲ್ಲಿ ಚಂದ್ರನು ಮೀನರಾಶಿಗೆ ಸೇರುವತಿಥಿಯು ಸಪ್ತಮಿಯಾದರೆ ಬಹಳವಾಗಿ ಮಳೆಯು ಸುರಿವುದು. ಪರಿವೇಶಗಳು ಬಿಳೀಛಾಯೆಯಾಗಿರಲು ವರ್ಷಾಭಾವವು ಹಳದಿಯು ವರ್ಣವಾಗಿದ್ದರೆ ಅತಿವೃಷ್ಟಿಯು, ಕರೀವರ್ಣವಾಗಲು ಪ್ರಜಾನಾಶವೂ ಕೆಂಪುಬಣ್ಣವಾಗಿರಲು ಕಲಹರೂಪವಾಗಿಯೂ ಇರುವುದು.

ಚಂದ್ರನ ಪರಿವೇಶವು ಆಷಾಢಮಾಸದೊಳಗೆ ರೋಹಿಣಿನಕ್ಷತ್ರದದಿವಸದಲ್ಲಿಯೂ, ಮಘಾನಕ್ಷತ್ರದೊಳಗೂ ಉಂಟಾದರೆ ಅನಾವೃಷ್ಟಿಯಿಂದ ದೇಶಕೆಲ್ಲಾ ಕ್ಷಾಮಪೀಡಿತವಾಗಿರುವುದು

ಅಘವೃದ್ಧಿಯು, ನಕ್ಷತ್ರಗಳೊಳು ರೋಗಪೀಡೆಯು, ಚಂದ್ರ
ಸೂರ್ಯರ ಗ್ರಹಣಕಾಲಗಳ ಫಲಗಳು.

ಚಂದ್ರಸೂರ್ಯರ ಗ್ರಹಣದಿವಸಗಳು ಅನೂರಾಧ, ಶ್ರವಣ ಧನಿಷ್ಠ, ಮೃಗಶಿರ, ಮೂಲ, ರೋಹಿಣಿ, ಈನಕ್ಷತ್ರಗಳಲ್ಲಿ ಉಂಟಾಗಲು ಪ್ರಜೆಗಳಿಗು ಅರಸರುಗಳಿಗೂ, ವಿಶೇಷವಾದಬಾಧೆಯುಂಟಾಗುವುದೆಂತಲು, ಅಶ್ವಿನಿ, ಆದ್ರಾ, ಪುಷ್ಯ, ಆಶ್ಲೇಷ, ಮಘ, ಕೃತ್ತಿಕಾ,ಆಶ್ಲೇಷ ಶತಭಿಷ,ರೇವತಿ,ಚಿತ್ತಾ, ಉತ್ತರಾಷಾಢ, ಉತ್ತರಾಭಾದ್ರ ಪೂರ್ವಾಭಾದ್ರ, ಸ್ವಾತಿ, ವಿಶಾಖ, ಅನೂರಾಧ, ಪುಬ್ಬ, ಈನಕ್ಷತ್ರಗಳಲ್ಲಿ ಅಲ್ಪವೃಷ್ಟಿಯು, ಮತ್ತು ರೋಗವು ಈನಕ್ಷತ್ರಗಳಲ್ಲಿ ಶಿಶುಗಳಿಗೆ ಪ್ರಾರಂಭವಾದರೆ ರೋಗಪೀಡಯು ಸಂಭವಿಸುವದೆಂಬದಾಗಿಯೂ ತಿಳಿಯಬೇಕು

—* (ನಕ್ಷತ್ರಗಳ ಗರ್ಭಕಾಲವು ಗರ್ಭರುತುವು )"—

ಸೂರ್ಯನು ಮೂಲಾನಕ್ಷತ್ರವನ್ನು ಪ್ರವೇಶಿಸಿದಾಗ ಆ ನಕ್ಷತ್ರದ ಅ

ರ್ಧಭಾಗ ಮೊದಲ್ಗೊಂಡು ಆರುದಿವಸಗಳು ಮತ್ತು ಮುದ್ವತ್ತುಘಳಿಗೆಗಳ ಪರ್ಯಂತರವೂ ಮುವ್ವತ್ತು ಘಳಿಗೆಗಳಮೇರಿಗೆ ಭಾಗಮಾಡಿದರೆ ಪೂರ್ವಾಷಾಢ ನಕ್ಷತ್ರದ ಮಳೆಯು ಆದಿಯಾಗಿ ಮೃಗಶಿರಾ ಮಳೆಯುಪರ್ಯಂತರವೂ ರಾತ್ರಿಕಾಲಬಂದು ಮಳೆಯಗರ್ಭವೆಂತಲು ಮತ್ತು ಇದೆ ರೀತಿಯಾಗಿಹಗಲುಕಾಲಬಂದು ನಕ್ಷತ್ರದ ಮಳೆಯುಗರ್ಭವೆಂಬದಾಗಿಯು, ಈಕ್ರಮದಿಂದ ಆರೂವರೆ ದಿನಸಗಳ ಪರ್ಯಂತರವು ಹದಿಮೂರು ನಕ್ಷತ್ರಗಳ ಗರ್ಭರುತುವಂದು ತಿಳಿಯಬೇಕಾಗಿರುವುದು

ಸೂರ್ಯನು ಪೂರ್ವಾಷಾಢ ನಕ್ಷತ್ರವನ್ನು ಪ್ರವೇಶಿಸಿದ ಕಾಲಮೊದಲ್ಗೊಂಡು ಈ ನಕ್ಷತ್ರದ ನಾಲ್ಕುಪಾದಗಳ ಅಂತ್ಯದವರಿಗೂ ಸಂಚಾರಮಾಡುತ್ತಿರುವ ಹದಿಮೂರು ದಿವಸಗಳ ಪರ್ಯಂತರವೂ ದಿನವೊಂದಕ್ಕೆಬಂದು ನಕ್ಷತ್ರ ಮಳೆಯರೀತಿಯಾಗಿ ಆದ್ರಾ ನಕ್ಷತ್ರದಿಂದ ಜ್ಯೇಷ್ಠಾ ನಕ್ಷತ್ರದವರಿಗೂ ಹದಿಮೂರು ಮಳೆಗಳ ಗರ್ಭವೆಂದಾಶಯವು

—*( ಇದರ ವಿವರವು ಹೇಗೆಂದರೆ. )*—

ಸೂರ್ಯನು ಮೂಲಾನಕ್ಷತ್ರದ ಮೂರನೆಪಾದಕ್ಕೆ ಚಲಿಸಿದಕಾಲಮೊದಲ್ಗೊಂಡು ಮುವ್ವತ್ತುಘಳಿಗೆಗಳ ವರಿವಿಗೂ ಪೂರ್ವಾಷಾಢ ನಕ್ಷತ್ರದಮಳೆಯಗರ್ಭಕಾಲವು ಈರೀತಿಯಾಗಿ ಮೇಲೆ ಎರಡುವಿಧಗಳಿಂದ ತಿಳಿಸಿರುವಪ್ರಕಾರ ಉಳಿದ ಎಲ್ಲಾನಕ್ಷತ್ರಗಳಿಗೂ ತಿಳಿಯಬೇಕಾಗಿರುವುದು.

—*( ಗರ್ಭದ ಸ್ವರೂಪವು )*—

ಇವು ಹತ್ತುವಿಧಗಳಾಗಿರುವವು ಹೇಗೆಂದರೆ ೧ ಶೈತ್ಯವು, ೨ ವಾಯುವು, ೩ ಉಷ್ಣವು ೪ ಮಂಜು ೫ ಮೇಘಡಂಬರವು ೬ ಮೇಘಶಬ್ಧವು, ೭ ಮಿಂಚು, ೮ ಚಂದ್ರಸೂರ್ಯರ ಪರಿವೇಷಗಳು, ೯ ಇಂದ್ರಚಾಪವು, ೧೦ ಅಲ್ಪವೃಷ್ಠಿಯು, ಈಹೇಳಲ್ಪಟ್ಟಹತ್ತು ಧಾತುಗಳೂ ಇದ್ದಪಕ್ಷದಲ್ಲಿಪೂರ್ಣಗರ್ಭವೆಂಬ ತಾತ್ಪರ್ಯವು.

—*( ಧಾತುಸಂಖ್ಯೆಗಳಿಂದ ಮಳೆಯನಿರ್ಣಯವು. )*—

ನಕ್ಷತ್ರಗಳ ಗರ್ಭಕಾಲನೊಳು ಹಿಂದೆಹೇಳಿದ ಹತ್ತುಧಾತ್ತುಗಳೂ ಪೂರ್ಣವಾಗಿದ್ದರೆ ಅದರಲ್ಲಿ ವಿವರಿಸಿರುವಪ್ರಕಾರ ಆಯಾಯನಕ್ಷತ್ರಗಳಲ್ಲಿ ಸಂಪೂರ್ಣಮಳೆಯು ಸಂಭವಿಸುವುದೆಂತಲು ೨-೩ ಧಾತ್ತುಗಳಿದ್ದರೆ ನಾಲ್ಕರಲ್ಲಿವೊಂದುಪಾಲು ಮಳೆಯುಂಟಾಗುವುದೆಂಬದಾಗಿಯು ೫ ಧಾತುಗಳಿರುತ್ತಿರಳಾಗಿ ಅರ್ಧಪಾಲು ವರ್ಷಯೋಗವೆಂತಲು ಈ ಹತ್ತುಧಾತುಗಳಲ್ಲಿ

ಬಂದುಧಾತುವಾದರೂ ಇಲ್ಲದಹೋದರೆ ಅಂತಾ ನಕ್ಷತ್ರದ ಮಳೆಯು ಸು ತರಾಂಬರುವುದೇ ಇಲ್ಲವೆಂತಲೂ ತಿಳಿಯಬೇಕು ಮತ್ತು ಈ ಹೇಳಲ್ಪಟ್ಟಗರ್ಭಗಳು ನಡೆಯುತ್ತಿರುವ ಕಾಲಗಳನ್ನು ಕ್ರಮವಾಗಿ ಶೋಧನೆಯಿಂದ ಅನುಭವಮಾಡಿಕೊಂಡು ಅದರಧಾತುಗಳನ್ನು ವಿವರವಾಗಿ ಅರಿತಿದ್ದು ಈ ಗರ್ಭಗಳು ನಡೆದ ಮಾರನೆವರ್ಷದಲ್ಲಿ ಸೂರ್ಯನು ಯಾವಯಾವ ನಕ್ಷತ್ರವನ್ನು ಪ್ರವೇಶಿಸುವನೊ ಅಂತಾ ಕಾಲದ ನಕ್ಷತ್ರದ ಮಳೆಯ ಸ್ವರೂಪವನ್ನುಕಂಡು ನಿರ್ಧರಿಸಿ ಹೇಳಬೇಕು. ಈ ಗರ್ಭಗಳು ನಡೆಯುವ ಸಮಯಗಳಲ್ಲಿ ಮೇಘಗಳು ಕರೀವರ್ಣನಾಗಿಯು, ಶುಭ್ರವಾಗಿಯು, ಇದ್ದರೆಸುವೃಷ್ಟಿಯಾಗುವುದೆಂತಲೂ, ವ್ಯತಿರಿಕ್ತವಾಗಿದ್ದರೆ ಸಾಮಾನ್ಯವಾಗಿ ಮಳೆಯು ಬರುವುದೆಂತಲು, ಗರ್ಭಗಳು ನಡೆಯುತಲಿರುವ ತತ್ಕಾಲದ ಲಗ್ನವು ಗ್ರಹಗಳ ಬಲಿಯುವುಳ್ಳದಾಗಿರಲು ವೃಷ್ಟಿಯೋಕ್ಕೆ ಉತ್ತಮವಾದ ಕಾರಣವೆಂದುತಿಳಿಯಬೇಕೆಂಬಾಶಯವು

ಮಾಸಗರ್ಭಗಳ ಮುಂದಿನವರುಷ ಮಳೆಯಯೋಗವನ್ನು ತಿಳಿಯುವಿಕೆ.

ಮಾರ್ಗಶಿರಮಾಸದಲ್ಲಿ ಶುಕ್ಲಪಕ್ಷದೊಳಗೆ ಪಾಡ್ಯಮಿಯಿಂದ ಪಾರ್ಣವಮಿವರಿವಿಗೂ ಆಕಾಶದಲ್ಲಿ ಮೇಘಗಳು ಆವರಿಸಿಕೊಂಡು ಗುಡುಗಿದರೆ ಆ ಮುಂದಿನಸಂವತ್ಸರದಲ್ಲಿ ಅತಿವೃಷ್ಟಿಯಾಗುವುದೆಂತಲೂ, ಕೃಷ್ಣಪಕ್ಷದಲ್ಲಿ ಅಶ್ಲೇಷಾನಕ್ಷತ್ರವು ಚತುರ್ಥಿಯದಿನದಲ್ಲಿ ಸೇರಿ ಆ ದಿವಸ ಮೇಘಗಳ ಆವರಣದಿಂದ ಗುಡುಗು, ಮಿಂಚುಗಳುಂಟಾಗಲ ಮುಂದಿನವರ್ಷದಲ್ಲಿ ಅತ್ಯಂತ ಸುವೃಷ್ಟಿಯಿಂದ ದೇಶವೆಲ್ಲಾ ಫಲಭರಿತವಾಗಿ ಸುಭಿಕ್ಷವಾಗುವುದೆಂಬದಾಗಿಯು ತಿಳಿಯುತಕ್ಕಭಾವವು

ಪುಷ್ಯಮಾಸದಲ್ಲಿ ಚತುರ್ಥಿಯದಿವಸ ಮೇಘಾವರಣದಿಂದಗುಡುಗು, ಮಿಂಚುಗಳುಂಟಾದರೆ ಮುಂದಿನ ವರುಷದೊಳು ಸುವೃಷ್ಟಿಯುಂಟಾಗುವುದೆಂದಾಶಯವು

ಆಷಾಢ, ಪುಷ್ಯ, ಈ ಎರಡುಮಾಸಗಳಲ್ಲಿಯೂ ರೋಹಿಣಿನಕ್ಷತ್ರದ ದಿವಸ ಮೇಘಗಳು ಆವರಿಸಿಕೊಂಡಿದರಾಗಿ ಸುವೃಷ್ಟಿಯುಂಟಾಗಿ ಸಸ್ಯಾಭಿವೃದ್ಧಿಯಿಂದ ಫಲಭರಿತವಾಗುವುದು.

ಪುಷ್ಯಮಾಸದೊಳಗೆ ಪಾರ್ಣವಮಿಯ ದಿವಸದಲ್ಲಿಯು, ಕೃಷ್ಣಪಕ್ಷದಲ್ಲಿ ತದಿಗೆಯ ದಿವಸದಲ್ಲಿಯೂ, ಮೇಘಗಳುಸೇರಿ ಗುಡುಗು, ಮಿಂಚು

ಗಳುಂಟಾಗಲು ಅತ್ಯಂತ ವೃಷ್ಟಿಯುಂಟಾಗಿ ಫಲಾಭಿವೃದ್ಧಿಯಾಗುವುದು

ವೃಶ್ಚಿಕಮಾಸದಲ್ಲಿ ಸ್ವಾತೀನಕ್ಷತ್ರವು ಸಪ್ತಮಿ, ಅಷ್ಟಮೀ, ದಿನಗಳಲ್ಲಿ ಸೇರಿರುವಾಗ ಮೇಘಗಳುಸೇರಿ ಗುಡುಗು, ಮಿಂಚುಗಳುಂಟಾದಲ್ಲಿ ವಿಶೇಷವಾಗಿ ಮಳೆಯಿಂದ ಸುಭಿಕ್ಷಪ್ರದವೆಂದಾಶಯವು

ಮಾರ್ಗಶಿರಮಾಸದಲ್ಲಿ ಅತ್ಯಂತವಾಗಿ ಮಂಜೂ, ಸಾಮಾನ್ಯವಾಗಿ ಮಳೆಯು, ವೃಶ್ಚಿಕಮಾಸದಲ್ಲಿ ಗಾಳಿಯೂ ಮತ್ತು ಬಿಸಿಲು ವುಂಟಾದಪಕ್ಷದಲ್ಲಿ ಆಮುಂದಿನ ವರ್ಷದಲ್ಲಿ ಸುಭಿಕ್ಷಪ್ರದವೆಂದು ತಿಳಿಯಬೇಕು,

ವೃಶ್ಚಿಕಮಾಸದಲ್ಲಿ ಮೂಲಾನಕ್ಷತ್ರದದಿನದಿಂದ ಭರಣಿನಕ್ಷತ್ರದ ದಿನದಪರ್ಯಂತರವೂ ಗರ್ಭಸೂಚಕಗಳಿದ್ದರೆ ಮುಂದಿನ ಸಂವತ್ಸರದಲ್ಲಿ ಆರ್ದ್ರಾಮಳೆಯಿಂದ ವಿಶಾಖಾನಕ್ಷತ್ರದ ಮಳೆಯಪರ್ಯಂತರವೂ ವಿಶೇಷವಾಗಿ ಸುವೃಷ್ಟಿ ಯುಂಟಾಗುವುದೆಂಬ ಭಾವವು.

ವೃಶ್ಚಿಕಮಾಸದಲ್ಲಿ ಪಾಡ್ಯಮಿಯಿಂದ ಮುಂದಿನವರುಷ ಚೈತ್ರಮಾಸದ ಅಮಾವಾಸ್ಯೆಯ ಪರ್ಯಂತರವೂ ಗರ್ಭಲಕ್ಷಣಗಳು ಸ್ವಲ್ಪಮಳೆಯಿಂದಲು ಸೂಕ್ಷ್ಮ ಗಾಳಿಯಿಂದಲುಕೂಡಿ ಇರವ್ವೊಂದು ದಿವಸಗಳಲ್ಲುಂಟಾಗಲು. ಆಷಾಢ, ಶ್ರಾವಣ, ಭಾದ್ರಪದಮಾಸಗಳಲ್ಲಿ ಸುವೃಷ್ಟಿಯಾಗುವುದೆಂಬಾಶಯವು.

ಪುಷ್ಯ, ಪೂರ್ವಾಷಾಢೆ, ಪೂರ್ವಾಭಾದ್ರ, ಆಶ್ಲೇಷಾ, ಮಖ, ಈನಕ್ಷತ್ರಗಳು ಆಷಾಢಮಾಸದ ಶುಕ್ಲಪಕ್ಷದೊಳು ಚತುರ್ಥಿ, ಪಂಚಮಿ, ಷಷ್ಠಿ, ಈ ತಿಥಿಗಳಲ್ಲಿಸೇರಿರುವ ಸಮಯದಲ್ಲಿ ಸ್ವಲ್ಪವಾದರೂ ವರ್ಷವುಂಟಾಗಲು ಮುಂದೆ ಮಳೆಯು ನಾಶವಾಗುವದೆಂಬಭಾವವು

ಆಷಾಢಮಾಸದಲ್ಲಿ ಶುದ್ಧಪಾಡ್ಯಮಿ, ಶ್ರಾವಣದಲ್ಲಿ ಶುಕ್ಲಪಕ್ಷದ ಬಿದಿಗೆ, ಭಾದ್ರಪದಮಾಸದಲ್ಲಿ ಶುಕ್ಲಪಕ್ಷದ ತದಿಗೆ, ಆಶ್ವಿಜದಲ್ಲಿ ಶುದ್ಧಚತುರ್ಥಿ, ಈತಿಥಿಗಳಲ್ಲಿ ಗರ್ಭಚಿಹ್ನೆಗಳಿರಲು ಅತಿವೃಷ್ಟಿಯಿಂದ ಧಾನ್ಯಾಭಿವೃದ್ಧಿ ಯಾಗುವುದೆಂಬಭಾವವು.

ಆಷಾಢಮಾಸದೊಳು ಶುಕ್ಲಪಕ್ಷದಲ್ಲಿ ಪೌರ್ಣಮಿ ತಿಥಿಯದಿವಸಪೂರ್ವದಿಕ್ಕಿನಲ್ಲಿ ಮಿಂಚಿದರೆ ಮಳೆಯು, ಆಗ್ನೇಯದಲ್ಲಿ ಪ್ರಜಾನಷ್ಟವೂದಕ್ಷಿಣದಲ್ಲಿ ಪ್ರಜಾರೋಗ್ಯವೂ, ನೈರುತ್ಯದಲ್ಲಿ ಐಶ್ವರ್ಯಾಭಿವೃದ್ಧಿಯು, ಪಶ್ಚಿಮದಲ್ಲಿ ವಿಶೇಷವರ್ಷವೂ, ವಾಯುವ್ಯದಿಕ್ಕಿನಲ್ಲಿ ಆರೋಗ್ಯವೂ, ಅತಿವೃಷ್ಟಿಯು, ಉತ್ತರದಿಶಿಯೊಳು ಮಂಗಳವೂಈಶಾನ್ಯದಿಕ್ಕಿನಲ್ಲಿ ಮಿಂಚಿ

ದರೆ ಸಕಲನಷ್ಟಗಳುಂ ವುಂಟಾಗುವುವೆಂಬ ಭಾವವು

ಅಷಾಢಮಾಸದಲ್ಲಿ ಕೃಷ್ಣಾಷ್ಟಮಿ ದಿವಸ ವಿಶೇಷವಾದ ಘಾಳಿ ಸಹಿತನಾಗ ಮಿಂಚುಂಟಾಗಳು ಅತಿವರ್ಷವೆಂಬ ಭಾವವು

ಶ್ರಾವಣಮಾಸದಶುಕ್ಲಪಕ್ಷದ ತ್ರಯೋದಶಿಯ ದಿನದಲ್ಲಿ ಮೇಘಾವರಣದಿಂದಪೂರ್ವದಿಕ್ಕಿನಲ್ಲಿ ಮಿಂಚು, ಗುಡುಗಗಳುಂಟಾದರ ಸುಭಿಕ್ಷವು

ಭಾದ್ರಪದಮಾಸದಲ್ಲಿ ತದಿಗಯದಿವಸ ಅತಿವೃಷ್ಟಿಯುಂಟಾಗಿ ಬಿಸಿಲು ಹೆಚ್ಚಾಗಿರಲು ಅತ್ಯಂತ ಮಳೆಸುರಿವುದು

ಆಶ್ವೀಜ ಶುದ್ಧ ದಶಮಿಯ ದಿವಸ ಕೃತ್ತಿಕಾನಕ್ಷತ್ರವುಸೇರಿ ಮಧ್ಯಾಹ್ನಾತ್ಪರದೊಳು ಕುಶಾರವೃಷ್ಟಿಯುಂಟಾದರೆ ಸಾಮಾನ್ಯಮಳೆಯಾಗುವುದು

ಕಾರ್ತೀಕಶುದ್ಧ ದ್ವಾದಶಿಯು ದಿನವು ವಿಶಾಖಾನಕ್ಷತ್ರದಿಂ ಸೇರಿರಲಾಗಿ ಆ ದಿನ ಮೇಘಾವರಣದಿಂದ ಗರ್ಜಿಸಿದರೆ ಮುಂದಿನ ಸಂವತ್ಸರ ವರ್ಷಾಭಾವವೆಂದು ತಿಳಿಯಬೇಕು,

ಮಾಘಮಾಸದ ಕೃಷ್ಣಪಕ್ಷದ ತ್ರಯೋದಶಿಯಲ್ಲಿ ಆರ್ದ್ರಾನಕ್ಷತ್ರವು ಸೇರಿ ಆದಿನ ಕುಷಾರವೃಷ್ಟಿಯಾದರೆ ಮುಂದೆ ದುರ್ಭಿಕ್ಷವೆಂಬ ಭಾವವು.

ಫಾಲ್ಗುಣಮಾಸದಲ್ಲಿ ಪೌರ್ಣಮಿಯದಿವಸ ರೋಹಿಣೀನಕ್ಷತ್ರವುಸೇರಿ ಮೇಘಾವರಣದಿಂದ ಗುಡುಗುಮಿಂಚುಸಹಿತವಾದರೆ ವರ್ಷವುಂಟಾಗಲು ಮುಂದೆ ಸುಭಿಕ್ಷವಾಗುವದಿಲ್ಲವೆಂಬಾಶಯವು

ಚೈತ್ರ ಬಹುಳ ಅಮಾವಾಸ್ಯೆಯ ದಿವಸ ಆರ್ದ್ರಾ ನಕ್ಷತ್ರವುಸೇರಿ ಸೂರ್ಯನು ಕೃತ್ತಿಕಾ ೯ ನೆ ಪಾದದಲ್ಲಿರಲು ಆ ಸಂವತ್ಸರ ಸುಭಿಕ್ಷವಾಗುವುದೆಂಬ ಭಾವವು

ಚೈತ್ರ ಶುಕ್ಲ ನವಮಿ ದಿವಸ ಪುನರ್ವಸು ನಕ್ಷತ್ರವುಸೇರಿ ಸೂರ್ಯನು ಅನೂರಾಧ ನಕ್ಷತ್ರಗತನಾಗಿದ್ದರೆ ಆ ದಿವಸ ಕುಷಾರವೃಷ್ಟಿಯೂ ಸಂಭವಿಸಿದ ಪಕ್ಷದಲ್ಲಿ ದೇಶವೆಲ್ಲಾ ಸುಭಿಕ್ಷವೆಂದರಿಯಬೇಕು.

ಆಶ್ವೀಜ ಶುದ್ಧ ತೃತೀಯಾಗಲ್ಲಿ ಸ್ವಾತೀ ನಕ್ಷತ್ರವುಸೇರಿ ಸೂರ್ಯನು ಮಖಯಲ್ಲಿರುವನಾದರ ಅನಾವೃಷ್ಟಿಯುಂಟಾಗುವುದು

—*( ಚಂದ್ರನ ಪೂರ್ಣ ಕ್ಷೀಣಕ್ಕ ಫಲವು )*—

ಚಂದ್ರನು ಪ್ರತಿತಿಂಗಳಲ್ಲಿಯೂ ಶುಕ್ಲಪಕ್ಷದ ಅಷ್ಟಮಿ ಮೊದಲ್ಗೊಂಡು ಕೃಷ್ಣಪಕ್ಷದ ಅಷ್ಟಮಿ ಪರ್ಯಂತರವೂ ಪೂರ್ಣವಾಗಿಹವು

ಈ ಪೂರ್ಣಚಂದ್ರನು ಸಕಲ ಕಾರ್ಯಗಳಲ್ಲಿಯೂ ಶುಭಕರನು ಕೃಷ್ಣಪಕ್ಷದ ಅಷ್ಟಮಿಯಿಂದ ಶುಕ್ಲಪಕ್ಷದ ಅಷ್ಟಮಿವರಿವಿಗೂ ಕ್ಷೀಣನು ಈ ಕ್ಷೀಣಚಂದ್ರನು ಅಶುಭಕರನೆಂದು ಭಾವವು

ಚಂದ್ರನು ಕ್ಷೀಣನಾಗಿ ಬುಧ ಶುಕ್ರರಿಂದಸೇರಿ ವರ್ಷಾಕಾಲದಲ್ಲಿ ಕೃಷ್ಣಪಕ್ಷಗಳ ಪೂರ್ವ ನಕ್ಷತ್ರಗಳಿಂದಿರುವ ತಿಥಿಗಳಲ್ಲಿದ್ದರೆ ಸಂಪೂರ್ಣ ವರ್ಷ ವಾಗುವುದು

ಕ್ಷೀಣಚಂದ್ರನು ಶನಿಯಿಂದ ಸೇರಿರುವಾಗ ಕೃಷ್ಣಪಕ್ಷದಲ್ಲಿ ಸೂರ್ಯಗ್ರಹಣವು ಬರುವ ದಿನದೊಳಗು ಕುಷ್ಠರೋಗವ್ಯಾಧಿಯುಂಟಾಗಲು ದೇಶದಲ್ಲಿ ರಾಜಪೀಡೆ ಯುಂಟಾಗುವುದು.

ಪೂರ್ಣಚಂದ್ರನು ಕೃಷ್ಣಪಕ್ಷದ ಚತುರ್ಥಿಯ ತಿಥಿಯಲ್ಲಿ ಅಂಗಾರಕ ಬುಧ, ಗುರು, ಶನಿಗಳಿಂದ ಕೂಡಿದವನಾದರೆ ಸಕಲ ದೇಶಗಳಲ್ಲಿಯೂ ಕ್ಷಾಮಪೀಡೆ ಯುಂಟಾಗುವುದು

ರಾಹುವು, ಶುಕ್ರನಿಗೆ ಹಿಂದುಗಡೆಯಲ್ಲಿಯೂ, ಬುಧ, ಶುಕ್ರರಿಗೆ ಮುಂಭಾಗದಲ್ಲಿಯೂ ಇರುತ್ತಾ ಶನಿ, ಸೂರ್ಯರ ಸಂಗಡಸೇರಿ ಒಂದೇ ಮನೆಯಲ್ಲಿದ್ದರೆ ರಾಜಾರಿಷ್ಟವು ಬಲವಾಗಿ ಸಂಭವಿಸಿ ತನ್ಮೂಲಕ ಸಕಲ ಪ್ರಜೆಗಳೂ ಲಯವನ್ನೈದುವರು

ರಾಹುವು ಪಾಪಗ್ರಹಗಳಿಂದಗೂಡಿ ಕಟಕ, ಮಿಥುನ ರಾಶಿಗಳಲ್ಲಿರುವಾಗ ಚಂದ್ರನಿಗ ಕ್ಷೀಣತ್ವವು ಸಂಭವಿಸಿದ್ದರೆ ರಾಜಪೀಡೆ ಯುಂಟಾಗಿ ವೃಷ್ಟಿನಾಶ ವಾಗುವುದು

ಚಂದ್ರನು ಸಪ್ತಮಸ್ಥಾನದಲ್ಲಿಯೂ ರಾಹುವು ಚಂದ್ರನಿಗಸಪ್ತಮದಲ್ಲಿಯೂ ಈರೀತಿಯಾಗಿ ಪರಸ್ಪರ ಸಮಸಪ್ತಕದೊಳಿರುವಾಗ ಸೂರ್ಯನು, ಮೃಗಶಿರ, ಪುನರ್ವಸು ಪೂರ್ವಾಷಾಢ, ನಕ್ಷತ್ರಗಳನ್ನು ಹೊಂದಿರುವಾಗ ಅಂಗಾರಕನು ಅಸ್ತನಾಗಿದ್ದರೆ ಸಕಲ ದುರ್ಭಿಕ್ಷವೂ ಶಾಂತವಾಗಿ ಸುಭಿಕ್ಷಪ್ರದ ವಾಗಿರುವುದು

ಸೂರ್ಯನು ಉತ್ತರಾಭಾದ್ರ ನಕ್ಷತ್ರವನ್ನು ಹೊಂದಿರುವಾಗ ರಾಹುವು ಕಟಕದಲ್ಲಿ ಬುಧ, ಶುಕ್ರರಿಂದ ಸೇರಿ ಗುರುವೀಕ್ಷಿತನಾಗಿರಲು ಉತ್ತರೆಯ ಮಳೆಯಲ್ಲಿ ವಿಶೇಷವಾಗಿ ವರ್ಷಿಸುವುದೆಂದಾಶಯವು.

ಅಂಗಾರಕನು ಅಸ್ತನಾಗಿ ಬುಧನು, ರಾಹುಸಹಿತನಾಗಿ ಶುಕ್ರನು, ಬಾಲನಾಗಿರುವಾಗ ಸೂರ್ಯಗ್ರಹಣವು ಬಂದರೆ ಸಕಲ ಪಶುಗಳಿಗೂ ನಾಶ

ನಗತಿ ಯುಂಟಾಗುವುದು ಅಂಗಾರಕನು ಉದಯನಾಗಿರುವಾಗ, ಶುಕ್ರನು ಅಸ್ತನಾಗಿಯು ಬುಧನು ಅಸ್ತನಾಗಿರುವಾಗ, ಗುರುವು ಉದಯನಾಗಿಯು, ಶನಿಯು, ಸೂರ್ಯನಸಂಗಡ ಸೇರಿಯೂ ಇರುವಲ್ಲಿ ಕುಷಾರವೃಷ್ಟಿಯಾಗಲು ಮುಂದಿನವರ್ಷವು ವಿಶೇಷವಾಗಿ ಫಲವಾಗುವದು.

ಸೂರ್ಯನು, ಬುಧನಿಂದ ಸಹಿತನಾಗಿ ಕನ್ಯಾರಾಶಿಯಲ್ಲಿರುವಾಗ ಚಂದ್ರನು ಪೂರ್ಣನಾಗಿದ್ದು ಶನಿಯು, ಅಂಗಾರಕನು, ಅಸ್ತನಾಗಿದ್ದರೆ ಆ ಸಂವತ್ಸರವೆಲ್ಲಾ ಕುಷಾರವೃಷ್ಟಿಯೇ ಬಲವಾಗುವದೆಂಬ ಭಾವವು

ಕೇತುವು, ಬೃಹಸ್ಪತಿಯಿಂದ ಸೇರಿ ರಾಹುವು, ಕೇತುವಿಗ ಎಂಟನೆ ಸ್ಥಾನದಲ್ಲಿರುವಾಗ ಚಂದ್ರನು, ಶನಿಸಹಿತನಾಗಿ ಒಂದೇಸ್ಥಾನದಲ್ಲಿರುತ್ತಿರಲು ಆಸಮಯದಲ್ಲಿ ಶುಕ್ರನು ಅಸ್ತನಾಗಲು ವಿಶೇಷವಾಗಿ ವರ್ಷಉಂಟಾಗುವುದು,

ಕೇತುವು, ಕಟಕದಲ್ಲಿ ಚಂದ್ರಸಹಿತನಾಗಿರುವಾಗ ಬುಧನು ಉದಯನಾಗಿ ರಾಹುವಿನೂಡನೆ ಸೇರಿರುವಾಗ ಸೂರ್ಯನು ಮೀನದಲ್ಲಿರುತ್ತಾ ಶುಕ್ರನಿಂದದೃಷ್ಟಿಯುಳ್ಳವನಾಗಲುಅತ್ಯಂತವರ್ಷದಿಂದ ಸುಭಿಕ್ಷವಾಗುವುದು

ರಾಹುವು, ಶುಕ್ರನು, ಸೂರ್ಯನು, ಅಂಗಾರಕನು, ಶನಿಯು, ಬೃಹಸ್ಪತಿಯು, ಈ ಆರುಗ್ರಹಗಳು ಏಕಸ್ಥಾನದಲ್ಲಿ ಸೇರಿ ಬುಧನಿಂದ ವೀಕ್ಷಿತರಾದರೆ ಸಕಲ ದೇಶಗಳೂ ಪ್ರಳಯವಾಗುವುದೆಂಬ ಭಾವವು

ರಾಹು, ಕೇತುಗಳಿಬ್ಬರೂ ಒಂದೇರಾಶಿಯಲ್ಲಿರುವಾಗ ಶನಿ, ಸೂರ್ಯ, ಬುಧ, ಗುರು, ಈ ನಾಲ್ವರೂ ಆ ರಾಹು, ಕೇತುಗಳಿಗೆ ಏಳನೆಸ್ಥಾನದಲ್ಲಿದ್ದರೆ ಸಕಲದೇಶದ ರಾಜರುಗಳಿಗೂ ಪರಸ್ಪರಯುದ್ಧಗಳು ಸಂಭವಿಸಿ ತನ್ಮೂಲಕ ಪ್ರಜಾಕ್ಷಯವೂಉಂಟಾಗುವುದು.

ಶನಿಯು, ಅಸ್ತನಾಗಿರುವಾಗ ಸೂರ್ಯ, ಚಂದ್ರ, ಬುಧ, ಕೇತು ಈ ನಾಲ್ಕು ಗ್ರಹಗಳು ಏಕಸ್ಥಾನದಲ್ಲಿ ಸೇರಿ ಅಂಗಾರಕನ ದೃಷ್ಟಿಯುಳ್ಳವರಾದರೆ ದೇಶದಲ್ಲಿನ ರಾಜರುಗಳಿಗೆಲ್ಲಾ ಪೀಡೆಯು ಬಲವಾಗಿ ಯುದ್ಧಗಳುಂಟಾಗುವುವೆಂದರಿಯತಕ್ಕದ್ದು

ಸೂರ್ಯನು ಸಂವತ್ಸರಕ್ಕೆ ಧೊರೆಯಾಗಿ ಶುಕ್ರನು ಮಂತ್ರಿಯೆಂದೆನಿಸಿಕೊಂಡು, ಅಂಗಾರಕನು ನೀರಸಾಧಿಪನಾಗಿ, ಬುಧನಿಗೆ ಸಸ್ಯಾಧಿಪತ್ಯವು ಧಾನ್ಯಾಧಿಪತ್ಯವೂ ಉಂಟಾಗಿ ಶನಿಯು ಅರ್ಘಾಧಿಪನಾಗಲು ಸಕಲ ದೇಶಗಳೂ ಸುಭಿಕ್ಷವಾಗಿರುವೆಂಬ ಭಾವವು,

ಬೃಹಸ್ಪತಿಯು ಸಂವತ್ಸರಾಧಿಪನಾಗಿ, ಬುಧನು ಮಂತ್ರಿತ್ವವು ಶುಕ್ರನ ಮೇಷಾಧಿಪತ್ಯವು. ಸೂರ್ಯನು ರಸವರ್ಗಕ್ಕೆ ಅಧಿಪತ್ಯವನುಳ್ಳವನು ಅಗಲು ಆಸಂವತ್ಸರದಲ್ಲಿ ಸಾಮಾನ್ಯವೃಷ್ಟಿಯಾಗಿ ಫಲವು ಕೊಂಚವಾಗುವದಂ ೨ ಭಾವವು

ಅಂಗಾರಕನು ವತ್ಸರಾಧಿಪನಾಗಿಯು, ಸೂರ್ಯನು ಮಂತ್ರಿಯಾಗಿಯು, ಶುಕ್ರನು ರಸಾಧಿಪನಾಗಿಯು ಬುಧನುನೀರಸಾಧಿಪನಾಗಿಯು, ಚಂದ್ರನು ಸೇನಾಪತಿಯಾಗಿಯು,ಇದ್ದರೆ ಆ ಸಂವತ್ಸರವು ಸಂಪೂರ್ಣವೃಷ್ಟಿಯಿಂದ ವಿಶೇಷ ಫಲವಾಗುವದೆಂದರಿಯಬೇಕು

ಬುಧನು, ಶುಕ್ರನು, ಶನಿಯು. ಈಮೂರುಗ್ರಹಗಳು ಅಸ್ತರಾಗಿರುವಾಗ ಸೂರ್ಯನು ಮೀನದಲ್ಲಿಯು, ಬೃಹಸ್ಪತಿಯು ಕರ್ಕಾಟಕದಲ್ಲಿಯು.ಅಂಗಾರಕನು ಮೇಷದೊಳಗೂ, ಇದ್ದರೆ ಆ ಮುಂದಿನ ವರ್ಷದಲ್ಲಿ ವಿಶೇಷವಾಗಿ ಫಲವಾಗುವದೆಂದಾಶಯವು

ಸೂರ್ಯನು ಉಚ್ಚನಾಗಿರುವಲ್ಲಿಯು, ಕೇತುವು ಮೀನದಲ್ಲಿರುವಾಗಲೂ, ಅಂಗಾರಕನು ಉದಯವಾಗುವಾಗಲೂ. ಶನಿ, ಗುರುಗಳು ಏಕರಾಶಿಯಲ್ಲಿರುವಾಗಲೂ, ಉತ್ತರಾನಕ್ಷತ್ರದ ಮಳೆಯು ಸಾಮಾನ್ಯವಾಗಿ ಬಂದರೂ ಆ ಸಂವತ್ಸರ ವಿಶೇಷವಾಗಿ ರೋಗೋಪದ್ರವಹುಂಟಾಗುವದೆಂದು ತಿಳಿಯಬೇಕು.

ಮೇಷಲಗ್ನದಲ್ಲಿ ಸೂರ್ಯನಿರುವಾಗ ಬುಧ, ಶುಕ್ರ, ರಾಹು, ಕೇತುಗಳು ವೃಷಭರಾಶಿಯನ್ನು ಹೊಂದಿ ಗುರುವಿನಿಂದ ಈಕ್ಷಿಸಲ್ಪಡುತಿದ್ದರೆ ಸಕಲ ದೇಶಗಳಲ್ಲಿಯೂ ರೋಗಾಧಿಕ್ಯ ವುಂಟಾಗುವುದಂಬ ಭಾವವು

ಕಾರ್ತೀಕಮಾಸದಲ್ಲಿ ಸೂರ್ಯಗ್ರಹಣವು ಮಾರ್ಗಶಿರದಲ್ಲಿ ಚಂದ್ರಗ್ರಹಣವು, ಬಂದು ಪುಷ್ಯಮಾಸದ ಪೌರ್ಣಮಿ ದಿವಸ ಉತ್ತರಾಯನವು ಸ್ವಾತೀನಕ್ಷತ್ರದಲ್ಲಾದರೆ ದೇಶದಲ್ಲೆಲ್ಲಾ ನೀರಕ್ಷಾಮಸಂಭವಿಸಿ ಪ್ರಜಾನಷ್ಟ ವುಂಟಾಗುವದೆಂಬದಾಗಿ ತಿಳಿಯತಕ್ಕದ್ದು

ಚೈತ್ರಮಾಸದಲ್ಲಿ ಚಂದ್ರಸೂರ್ಯ ಗ್ರಹಣಗಳುಂಟಾಗಿ ವೈಶಾಖಕೃಷ್ಣಪಕ್ಷ ಚತುರ್ಥಿಯ ದಿವಸದಲ್ಲಿ, ರೋಹಿಣೀನಕ್ಷತ್ರದಲ್ಲಿ, ಸೂರ್ಯನು ಸೇರಿ ಅದೇದಿನದಲ್ಲಿ ಶನಿಯು ಅಸ್ತನಾದರ ದುರ್ಭಿಕ್ಷ ಉಂಟಾಗುವುದರಲ್ಲಿ ಸಂಶಯವಿಲ್ಲವಂದರಿಯತಕ್ಕದ್ದು.

ಮಾಘಮಾಸದ ಶುಕ್ಲಪಕ್ಷ ಸಪ್ತಮಿ ದಿನದಲ್ಲಿ ಚಂದ್ರನು ಕರ್ಕಾ

ಟಕದಲ್ಲಿರುತ್ತಾ ಶನಿ, ಸೂರ್ಯ ಬುಧ, ಅಂಗಾರಕ ಇವರು ಮಕರರಾಶಿ ಯಲ್ಲಿರುವಾಗ ಬೃಹಸ್ಪತಿಯು ಅಸ್ತನಾಗಿರಲು ನೂರುಸಂವತ್ಸರಗಳು ಅನಾವೃಷ್ಟಿಯಿಂದರುವದೆಂದು ತಿಳಿಯಬೇಕು

ಬೃಹಸ್ಪತಿಯು, ಶನಿಯು ಅಂಗಾರಕನು, ಸೂರ್ಯನು, ಇವರು ನಾ ಲ್ವರು ಉಚ್ಚರಾಗಿಯು, ಬುಧನು ಅಸ್ತನಾಗಿಯು, ಚಂದ್ರನು, ಅನೂರಾ ಧಾ ನಕ್ಷತ್ರವನ್ನು ಕೃಷ್ಣಪಕ್ಷದಲ್ಲಿ ಸೇರಿಯು, ಶುಕ್ರನು, ಸ್ವಾತೀನಕ್ಷತ್ರ ದಕಡೆಯ ಪಾದದಲ್ಲಿರುತ್ತಾ ಅಸ್ತನಾದರೂ, ಈ ಸಮಯದಲ್ಲಿ ವಿಶಾಖಾ ಚತುರ್ಥ ಚರಣದಲ್ಲಿ ಸೂರ್ಯೋಪರಾಗ ಉಂಟಾಗಲು ಸಕಲ ದೇಶದಲ್ಲಿ ಯು ದರಿದ್ರವೆಂಬ ನಾಮವೇ ಅಡಗಿ ಹೋಗುವದೆಂದಾಶಯವು.

ಸೂರ್ಯನು ಕನ್ಯಾರಾಶಿಯನ್ನು ಸೇರಿರುವಾಗ ಬುಧಶುಕ್ರರು ಮೀನ ರಾಶಿಯಲ್ಲಿಯು, ಬೃಹಸ್ಪತಿಯು ಕರ್ಕಾಟಕದಲ್ಲಿಯು, ಅಂಗಾರಕ, ಚಂ ದ್ರ, ಶನಿಗಳು ಮೇಷರಾಶಿಯಲ್ಲಿದ್ದರೆ ಅತ್ಯಂತ ವೃಷ್ಟಿಯಿಂದ ಸುಭಿಕ್ಷ ವುಂಟಾಗುವದೆಂದು ತಿಳಿಯಬೇಕು.

ಚಂದ್ರನು ವಿಶಾಖಾ ನಕ್ಷತ್ರವನ್ನು ಪ್ರವೇಶಿಸಿದಾಗ ಸೂರ್ಯಗ್ರಹಣ ವುಂಟಾಗಿ ಬುಧ, ಗುರು, ಶುಕ್ರ, ಶನಿ,ರಾಹು, ಕೇತಗಳು ಮೇಶರಾಶಿಯ ಲ್ಲಿ ನೆಲಶಿದವರಾದರೆ ಪ್ರಪಂಚವೆಲ್ಲಾ ನಾಶವಾಗುವುದೆಂದು ತಿಳಿಯಬೇಕು

ಚಂದ್ರಸೂರ್ಯರು ಪರಸ್ಪರವಾಗಿ ಸಮಸಪ್ತಕದಲ್ಲಿರುವಾಗ ಅಂಗಾ ರಕನು, ಸೂರ್ಯನಹಿಂದೆಯು, ಬೃಹಸ್ಪತಿಯು ಚಂದ್ರನಮುಂದೆಯು, ಇ ರುತ್ತಾ ರಾಹು, ಕೇತುಗಳು ಸೂರ್ಯನಿಗೆ ಪಂಚಮಸ್ಥಾನವನ್ನು ಹೊಂ ದಿರುವರಾಗಿಯು, ಶನಿ, ಶುಕ್ರರು ಏಕರಾಶಿಯಲ್ಲಿರುತ್ತಿರಲೂ ಇದ್ದರೆ ಆ ಸಂವತ್ಸರವೆಲ್ಲಾ ಖಂಡವೃಷ್ಟಿಯೇ ಬಾಹುಳ್ಯವಾಗಿ ಅತ್ಯಲ್ಪ ಫಲವಾಗುವ ದೆಂದರಿಯಬೇಕು.

ಚಂದ್ರಗ್ರಹಣ ಗುರುವಾರದಲ್ಲಿಯು, ಸೂರ್ಯೋಪರಾಗವು ಅಂ ಗಾರಕವಾರದಲ್ಲಿಯೂ ಒಂದೇಪಕ್ಷದಲ್ಲಿ ಈರೀತಿಯಾಗಿ ಸಂಭವಿಸಿದರೆ ಆ ಮಾಸದಲ್ಲಿ ಶನಿ. ಬುಧ, ಗುರು, ಈ ಮೂರುಗ್ರಹಗಳೂ ಅಸ್ತವನ್ನೈದಿದ ವರಾಗಲು, ಆ ಸಂವತ್ಸರವೆಲ್ಲಾ ಕ್ಷಾಮಪೀಡೆಯು ಬಲವಾಗಿ ಸಸ್ಯನಾಶ ವಾಗುವದು.

ಸ್ವಾತೀನಕ್ಷತ್ರದಲ್ಲಿ ಶುಕ್ರನು, ವಿಶಾಖೆಯಲ್ಲಿ ಬುಧನು ಮೂಲದಲ್ಲಿ ಸೂರ್ಯನು, ಆದ್ರಾ್ರನಕ್ಷತ್ರದೊಳು ಚಂದ್ರನು, ರೇವತಿಯಲ್ಲಿ ಅಂಗಾರಕ

ನು, ಭರಣಿಯಲ್ಲಿ ಶನಿಯು, ಶತಭಿಷದಲ್ಲಿ ಬೃಹಸ್ಪತಿಯು, ಇರುತ್ತಿರುವಾಗ ಚಂದ್ರಸೂರ್ಯ ಗ್ರಹಣಗಳು ಒಂದೇಮಾಸದಲ್ಲಿ ಉಂಟಾಗಲು ಸಕಲ ದೇಶಗಳೂ ರೋಗಮಯವಾಗಿರುವದೆಂಬ ಭಾವವು.

ಜೇಷ್ಠಮಾಸದೊಳು ಸೋಮೋಪರಾಗವುಂಟಾಗಿ ಆದಿನ ಸೂರ್ಯನು ಆಶ್ಲೇಷನಕ್ಷತ್ರವನ್ನು ಸೇರಿ ಆಸೂರ್ಯನಿಗೆ ನಾಲ್ಕನೆಮನೆಯಲ್ಲಿ ಅಂಗಾರಕ, ಬುಧ, ಶನಿ, ರಾಹುಗಳು ನೆಲಸಿ ಸೂರ್ಯನನ್ನು ಬೃಹಸ್ಪತಿಯು ವಕ್ರಗತಿಯಿಂದ ನೋಡುತಲಿದ್ದರೆ ರಾಜಯುದ್ಧಗಳು ಬಲವಾಗಿ ದೇಶವು ಲಯವನ್ನೈದುವದು.

ಬುಧನು, ಶುಕ್ರನು, ರಾಹುವು, ಈ ಮೂರುಗ್ರಹಗಳು ಮೀನರಾಶಿಯಲ್ಲಿರುವಾಗ ಅಂಗಾರಕ, ಸೂರ್ಯಚಂದ್ರರು, ಕರ್ಕಾಟಕವನ್ನು ಹೊಂದಿರುವಾಗಲು, ಆಸಮಯಲ್ಲಿ ಚಂದ್ರೋಪರಾಗವು ಸಂಭವಿಸಿದರೆ ಅನಾವೃಷ್ಟಿಯು,ಮೂರುವರುಷಗಳ ಪರ್ಯಂತರವೂ ಉಂಟಾಗುವದೆಂಬಭಾವವು

ಅಂಗಾರಕನು ಮುಂಭಾಗದಲ್ಲಿಯು ಶುಕ್ರನು ಹಿಂದುಗಡೆಯೊಳಗೂ ನಡೆಯುತಲಿದ್ದರೆ ಅಂಸ್ಥಾಸಮಯದಲ್ಲಿ ಅತ್ಯಲ್ಪ ವರ್ಷಉಂಟಾಗಿಕಲಹಗಳು ಅಧಿಕವಾಗಿದ್ದರೂ ಪ್ರಳಯಸ್ಥಗಳಲ್ಲಿಯೂ ಮಂಗಳವಾಗಿಯೇ ಇರುವದೆಂಬ ಭಾವವು

ಶುಕ್ರನು ಬುಧನನಂಗಡಸೇರಿ ನಂಚರಿಸುತಲಿರುವಾಗ ಭೂಮಂಡಲದಲ್ಲೆಲ್ಲಾ ಅತಿವೃಷ್ಟಿಯುಂಟಾಗಿ ಸಸ್ಯಾಭಿವೃದ್ಧಿ ಯಾಗುವದೆಂತಲೂ, ಆಸಮಯದಲ್ಲಿ ಸೂರ್ಯನು ಸೇರಿದವನಾಗಲು ಅತಿವರ್ಷಯೋಗವು ಕಡಮೆಯಾಗಿ ಫಲಗಳೆಲ್ಲಾ ಸಾಮಾನ್ಯವಾಗುವವುವೆಂತಲೂ ಅರಿಯತಕ್ಕದ್ದು

ಬುಧನು ಶುಕ್ರನು, ಚಂದ್ರನು ಇವರೆಲ್ಲಾ ಏಕಸ್ಥಾನದಲ್ಲಿದ್ದರೆ ವಿಶೇಷವಾದ ವರ್ಷದಿಂದ ಸಕಲಫಲಗಳೂ ಅತ್ಯುತ್ತಮವಾಗುವುವೆಂದುನ್ನು ಚಂದ್ರಸೂರ್ಯರ ಮಧ್ಯದಲ್ಲಿ ಶುಕ್ರನು ಸಂಚರಿಸುವನಾಗಲು ಅನಾವೃಷ್ಟಿಯಿಂದ ಫಲ ನಾಶವಾಗುವುದೆಂತಲೂ ತಿಳಿಯಬೇಕು

ಬೃಹಸ್ಪತಿಯು ಮುಂದೆ ಇರುವಾಗ ಭೂಮಂಡಲದಲ್ಲಿ ವಿಶೇಷವಾಗಿ ಮಳೆಯು ಸತದು ಅರ್ಘವೃದ್ಧಿಯಾಗಿರುವವಲ್ಲದೆ ಅವನು ಚರನಾಗಿರುವಾಗ ಅಧಿಕವಾಗಿ ರಾಜೋಪದ್ರವ ಉಂಟಾಗಿ ಸಸ್ಯಾಭಿವೃದ್ಧಿಗೂ ತೊಂದರೆಯಾಗುವುದು.

ದೇವಗುರುವಾದ ಬೃಹಸ್ಪತಿಯು ಮುಂದಿರುವಾಗ ದರೆಯಲ್ಲಿ ಅತಿವೃ

ಷ್ಟಿಯುಂಟಾಗಿ ಸಂಪೂರ್ಣವಾಗಿಫಲವಾಗುವುದು.ಬುಧನು ಈರೀತಿಯಾಗಿ ಮುಂದಿರುವಾಗ ಪ್ರಪಂಚದೊಳು ರೋಗಸಂಬಂಧವಾದ ಬಿರುಗಾಳಿಯು ಬೀಸುತ್ತಾ ತನ್ಮೂಲಕ ಅರ್ಧಬೆಳೆ ಯುಂಟಾಗುವುದೆಂದಾಶಯವು.

ಚಂದ್ರನು, ಸೂರ್ಯನು, ಶನಿಯು, ಬುಧನು ಇವರುಗಳನ್ನು ಆಶ್ಲೇಷಾನಕ್ಷತ್ರವು ಸೇರಿದ್ದರೆ ತತ್ಕಾಲದಲ್ಲಿ ಸಾಮಾನ್ಯವಾಗಿ ಮಳೆಯು ನಡೆದು ಅಲ್ಪವಾಗಿಸಸ್ಯಾಭಿವೃದ್ಧಿಯಿಂದ ಫಲವಾಗುವುದಲ್ಲದೆ ತಂದನಕೋರೆದೋಡುವಂದದಿ ಅಶುಭವುಂಟಾಗಿ ಜಗತ್ತಿಗೆ ಕೇಡು ಸಂಭವಿಸುವುದೆಂಬದಾಗಿ ಅರಿಯತಕ್ಕದ್ದು.

ಶುಭಗ್ರಹಗಳ ಯೋಗವುಂಟಾಗಿರಲಾಗಿ ಅನವರತವೂ ಇಚ್ಛಾನುಸಾರ ಮಳೆಯು ನಡೆದು ಸಂಪೂರ್ಣ ಫಲವಾಗುವುದು. ಪಾಪಗ್ರಹಗಳಾದ ಶುಕ್ರಗ್ರಹಗಳ ಯೋಗವಿರಲು ಅಂಥಾ ಉತ್ತಮ ಫಲವೆಲ್ಲಾ ನಾಶವನ್ನೈದುವುವೆಂದಾಶಯವು.

ಮೂರು ಗ್ರಹಗಳ ಯೋಗವಾಗಲು ಸಮಸ್ತಫಲಕ್ಕೂ ನಾಶನಕರವಾಗಿರ್ಪುದು ವಾರಿಧಿ ಗ್ರಹಯೋಗಕ್ಕೆ ವರ್ಷಯೋಗಕ್ಕೆ ಕುಂದಕವು ಐದುಗ್ರಹ ಯೋಗಗಳುಂಟಾಗಲು ಪೃಥ್ವೀಪಾಲರಿಗೆ ಕಡುಕಷ್ಟವಾಗಿರುವುದು ಮತ್ತು ಮೂರುಗ್ರಹಗಳ ಯೋಗಗಳುಂಟಾದಲ್ಲಿ ಉಳಿಯುವುದೇಕಷ್ಟವೆಂದಾಶಯವು —*(ಶುಕ್ರಚಾರ ಫಲವು )*—

ಮಘಾನಕ್ಷತ್ರ ಮೊದಲ್ಗೊಂಡು ಚಿತ್ತಾನಕ್ಷತ್ರದ ವರಿವಿಗೂ ಶುಕ್ರನು ಸಂಚರಿಸುತ್ತಾ ಪಶ್ಚಿಮ ದಿಶಿಯಲ್ಲಿರುವ ಕಾಲದೊಳು ವರ್ಷಗಯೋಗವು ಕೊಂಚವಾಗಿ ತನ್ಮೂಲಕದಿಂದ ಫಲಶೂನ್ಯವಾಗುವುದೆಂದಾಶಯವು

ಪೂರ್ವ ಶುಕ್ರನಾದಲ್ಲಿ ಸ್ವಾತಿ, ವಿಶಾಖ, ಅನೂರಾಧ, ಈಮೂರು ಮಳೆಗಳು ಕಡಮೆಯಾಗುವಲ್ಲದೆ ದೇಶದಲ್ಲಿನ ಕುರಿ, ಮೇಕೆಗಳೆಲ್ಲಾ ನಶಿಸಿಹೋಗುವುವುದೆಂದರಿಯತಕ್ಕದ್ದು.

ಬೃಹಸ್ಪತಿಯು ಅಸ್ತಮಿಸುವ ಕಾಲದಲ್ಲಿ ಅತ್ಯಂತವೃಷ್ಟಿಯುಂಟಾಗುವುದಲ್ಲದೆ ಉದಯಲಗ್ನದಲ್ಲಿ ಬುಧನಿದ್ದರೆ ಅತ್ಯಂತ ಮಳೆಯಿಂದಲೇ ಫಲವೆಲ್ಲಾ ನಾಶವಾಗುವುದಲ್ಲದೆ ಮನೆಗಳನೆಲ್ಲಾ ಅತ್ಯಂತ ಯೆತ್ತರದಲ್ಲಿಯೇ ಕಾಟ್ಟಬೇಕಾಗುವುದೆಂಬ ಭಾವವು

ಪೂರ್ವದಿಕ್ಕಿನಲ್ಲಿ ಬೃಹಸ್ಪತಿಯು ಯಿರವನಾವದೆ ಅಘೋರವಾದವೃಷ್ಟಿ ಯುಂಟಾಗಿ ವಿಶೇಷಫಲ ವುಂಟಾಗುವುದೆಂತಲೂ,ಪಶ್ಚಿಮದ ಬೃಹಸ್ಪ

ತಿಯಾಗಿರಲು ಮಳೆಯು ಅಧಿಕವಾಗಿ ನಡೆದು ಅಂತ್ಯಭಾಗದಲ್ಲಿ ಸಸ್ಯಕ್ಕೆ ಹಾನಿಯುಂಟಾಗುವುದೆಂತಲೂ ಅರಿಯತಕ್ಕದ್ದು

ಬೃಹಸ್ಪತಿಯು ಉದಯವಾಗುವ ಸಮಯದಲ್ಲಿಯು ಶುಕ್ರನು ಬೃಹಸ್ಪತಿಯ ಸಂಗಡ ಇರುವಲ್ಲಿಯು ಮಳೆಯುಬರುವುದಿಲ್ಲ ಮತ್ತು ಗುರುವು ಅಸ್ತಮಿಸುವಕಾಲದಲ್ಲಿ ಶನಿಯು ಇರುತ್ತಿದ್ದರೆ ಭೂಮಂಡಲದಲ್ಲಿ ಅತ್ಯಂತ ಸುವೃಷ್ಟಿಯುಂಟಾಗುವುದು

ಬುಧನ ಚಾರಗತಿಯಲ್ಲಿ ಶುಕ್ರನು ಬರುವನಾದರೆ ವಿಶೇಷವಾಗಿವರ್ಷಿಸುವುದೆಂತಲೂ, ಆ ಸಮಯದೊಳು ಸೂರ್ಯನು, ಶುಕ್ರನು ಇವರೀರ್ವರೂ ಇರುವರಾದರೆ ಅತ್ಯಂತವಾದ ಸುಂಟರುಗಾಳಿಯಿಂದ ವರ್ಷಾಭಾವ. ವಾಗುವುದೆಂಬದಾಗಿಯೂ ತಿಳಿಯತಕ್ಕದು

—*(ಪ್ರತಿ ಸೂರ್ಯನ ಫಲವು,)*—

ಸೂರ್ಯನಿಗೆ ಬಲಭಾಗದೊಳು ಪ್ರತಿರವಿಯು ಕಾಣಬಂದರೆ ಅಂದಿನಿಂದ ಎರಡುದಿವಸಗಳೊಳಗಾಗಿ ಸಕಲ ದೇಶದಲ್ಲಿಯೂ ಸಂಪೂರ್ಣವೃಷ್ಟಿಯಾಗಿ ಎಲ್ಲೆಲ್ಲಿಯು ಧಾನ್ಯಸಮೃದ್ಧಿ ಯುಂಟಾಗುವುದೆಂಬಾಶಯವು

ಸೂರ್ಯನಿಗೆ ವಾಮಭಾಗ ಅಂದರೆ ಎಡಪಾರ್ಶ್ವದಲ್ಲಿ ಪ್ರತಿರವಿಕಾಣಿಸಲಾಗಿ ಅಂದಿನಿಂದ ಹದಿನೈದು ದಿವಸಗಳು ವರ್ಷಾಭಾವವಾಗುವುದೆಂತಲೂ, ಆಸಮಯದಲ್ಲಿ ನೈರುತ್ಯದಿಕ್ಕಿನ ಘಾಳಿಯು ಬೀಸಿದರೆ ಅರ್ಘವೃದ್ಧಿಗೆ ಕೊರತೆಯುಂಟಾಗುವು ದೆಂಬದಾಗಿಯೂ ತಿಳಿಯತಕ್ಕದ್ದು

ಸಂಧ್ಯಾಕಾಲದಲ್ಲಿ ಪೂರ್ವದಿಶಿಯೊಳು ಪ್ರತಿರವಿಯು ಮಂಜಿನಂದದಿ ಕಾಣಬಂದರೆ ದೇಶವೆಲ್ಲಾ ಕ್ಷೀಣವಾಗುವುದು ವಾಯವ್ಯದಿಕ್ಕಿನಲ್ಲಿ ಇದೇರೀತಿಯಾಗಿ ತೋರಬಂದರೆ ಸಮಸ್ತದೇಶವೂ ಕ್ಷಾಮನಿಂದಿರುವುದು

ಪೂರ್ವ, ಪಶ್ಚಿಮ,ದಿಕ್ಕುಗಳೆರಡರಲ್ಲಿಯೂ ಪ್ರತಿರವಿಯು ಕಾಣಲಾಗಿ ಸಕಲ ಪ್ರಜೆಗಳೂ ಲಯವನ್ನೈದುವುರಲ್ಲದೆ ನಾನಾವಿಧಗಳಾದತೊಂದರೆಗಳೂ ಸಂಭವಿಸುವುವು ಇದೇಪ್ರಕಾರವಾಗಿಮಧ್ಯಾಹ್ನ ಸಮಯದೊಳು ಕಾಣಬಂದರೆ ಸಕಲ ಪ್ರಜೆಗಳಿಗೂ ಕೇಡುಸಂಭವಿಸಿ ರಕ್ತಪ್ರವಾಹಗಳಾಗುವುದೆಂದು ಭಾವಿಸತಕ್ಕದ್ದು.

ಯಾವ ದಿವಸದಲ್ಲಿಯೇ ಆಗಲಿ ಪಗಲು ಮೊದಲನೆಯ ಝಾಮದಲ್ಲಿ ಪ್ರತಿ ಸೂರ್ಯನುಂಟಾಗಲು ನಾನಾವಿಧವಾದ ಕಲಹಗಳುಂಟಾಗುವವು ಎರಡನೆಯ ಯಾಮದೊಳು ಪ್ರತಿರವಿಯು ಕಾಣಬರಲು ಘೋರವಾದ

ಜಲಪ್ರಳಯ ವುಂಟಾಗಿ ಅಶುಭಫಲಗಳು ಸಂಭವಿಸುವವೆಂದು ತಿಳಿಯ ಬೇಕು.

ಮೂರನೆಯ ಝಾಮದಲ್ಲಿ ಪ್ರತಿರವಿಯು ಕಾಣಬಂದರೆ ಬಂದೇದಿನದಲ್ಲಿ ಅತ್ಯಂತವಾದ ಮಳೆ ಯುಟಾಗುವದೆಂತಲೂ ಸಂಧ್ಯಾಕಾಲಲ್ಲಿ ಕಂಡದ್ದೇ ಆದರೆ ಪ್ರಪಂಚದಲ್ಲಿ ಕುದುರೆಗಳಿಗೂ, ಆನೆಗಳಿಗೂ, ಮನುಷ್ಯರಿಗೂ, ಮರಣಕಾಲವೆಂದೇ ತಿಳಿಯಬೇಕೆಂಬದಾಗಿಯೂ ಭಾವಿಸಬೇಕು

ಪ್ರತಿ ನಳಲು ಮಳೆಗ ತೋಂದರಯಂತಲೂ. ಅದರಂತಯೇ ದ್ವಿವಿಧವಾದ ನಳಲುನಿಂದ ರಾಜಗೃಹಕ್ಕ ಕೇಡಂಬದಾಗಿಯೂ, ನಾಲ್ಕರಿಂದದುರ್ಭಿಕ್ಷ ಪ್ರಾಪ್ತವಾಗುವುದೆಂತಲು ಇದೇರೀತಿಯಾಗಿ ಐದು ತೋರಲಾಗಿ ಭೂಮಂಡಲಕೆಲ್ಲಾ ಹಾನಿಯುಂಟಾಗುವದೆಂತಲು ತಿಳಿಯಬೇಕು

ಮೀನ, ಮಕರ, ಧನುಸ್ಸು, ಕರ್ಕಾಟಕ, ಈ ಲಗ್ನಗಳಲ್ಲಿ ಪ್ರತಿರವಿಯು ಕಾಣಬಂದರೆ ವಿಶೇಷವಾಗಿ ಮಳೆ ಯುಂಟಾಗಿ ದೇಶವೆಲ್ಲಾ ಫಲಭರಿತವಾಗಿರವದು

ಮೇಷ, ಕುಂಭಗಳಲ್ಲಿಯಾದರೆ ಮೇಲೆ ಹೇಳಿದಂಥಾ ಫಲದಲ್ಲಿ ಅರ್ಧ ವುಂಟಾಗುವುದೆಂದು ತಿಳಿಯಬೇಕು.

ಮಳೆಯು ಹೊಯ್ಯುತಲ್ಲಿರುವ ಸಮಯದಲ್ಲಿ ಸೂರ್ಯನಕಳೆಯೊಳಗೆ ಪರಿವೇಷವು ಕಾಣಬಂದರೆ ಮಳೆಯು ಕುಂದುವುದೆಂತಲೂ, ವರ್ಷವು ಇಲ್ಲದಿರುವ ಕಾಲದೊಳು ಚಂದ್ರನು ಪರಿವೇಷವುಳ್ಳನಾದ ಪಕ್ಷದಲ್ಲಿ ಅತಿವೃಷ್ಟಿಯಾಗುದೆಂತಲೂ ಭಾವವು,

ಪರಿವೇಷಗಳಲ್ಲಿ ಗುರು, ಶನಿಗಳು ಏಕತ್ರ ಇರುವರಾದರೆ ಅತಿಶಯವಾದ ವರ್ಷ ಉಂಟಾಗುವುದೆಂತಲೂ, ಆ ಕಾಲದಲ್ಲಿ ವರ್ಷವು ಪ್ರಾರಂಭವಾದರೆ ಸಾಮಾನ್ಯವಾಗಿರುವದೆಂತಲೂ ಭಾವವು.

ಸೂರ್ಯನ ಪರಿವೇಷದಲ್ಲಿ ಶನಿಯು, ಅಂಗಾರಕನು, ಭೃಗುವು, ಇರುತ್ತಿರುವ ಸಮಯದಲ್ಲಿ ವೊಂದುಮಾಸದ ಪರ್ಯಂತರವೂ ಅತ್ಯಂತವೃಷ್ಟಿಯುಂಟಾಗಿ ಭೂಮಂಡಲವೆಲ್ಲಾ ತಿರುಗುವುದೆಂದಾಶಯವು.

ಅಂಗಾರಕನು, ಶನಿಯು, ಬೃಹಸ್ಪತಿಯು ಇವರುಗಳು ಬಂದು ತಿಂಗಳ ಪರ್ಯತಂರವೂ ಪರಿವೇಷ ಮಧ್ಯದಲ್ಲಿ ತಪ್ಪದೆ ಇರುತ್ತಿದ್ದರೆ ಶುಭಕರವಾದಂಥಾ ಅಂದರ ಅತ್ಯುತ್ತಮವಾದ ಆನುಕೂಲ್ಯ ಮಳೆಯುಂಟಾಗಿ ದೇಶದ ಅರಸರೆಲ್ಲಾ ಸುಖಾನುಭವದಲ್ಲಿರುವುದೆಂಬ ಭಾವವು.

ಪ್ರಥಮ ಯಾವುದ ಪರಿವೆಷದಲ್ಲಿ ಸುವೃಷ್ಟಿಯೂ ಎರಡನೆಯ ಯಾವುದಲ್ಲಿ ರಾಜಪೀಡೆಯೂ, ರಾಜಭಾಧೆಯೂ, ಮೂರನೆಯ ಯಾವುದಲ್ಲಿ ಅತ್ಯಂತವಾದ ವರ್ಷವು ಈಪ್ರಕಾರವಾಗಿ ಫಲಗಳುಂಟಾಗುವುವೆಂದು ಭಾವವು.

ಭಾನು ಸೋಮ ವಾರಗಳಲ್ಲಿ ಐದಾರು ದಿವಸಗಳ ಪರ್ಯಂತರವು ಪ್ರತಿ ಸೂರ್ಯನು ಮತ್ತು ಚಂದ್ರಸೂರ್ಯ ಪರಿವೇಷಗಳು ತಪ್ಪದೆ ಉಂಟಾದರೆ ಮೂರು ತಿಂಗಳ ಪರ್ಯಂತರವು ಜಲವೆಲ್ಲಾ ಶೋಷಿಸಿಹೋಗಿ ಆ ಸಂವತ್ಸರವೆಲ್ಲಾ ದುರ್ಭಿಕ್ಷವಾಗುವುದೆಂದು ಭಾವವು

—(ಇಂದ್ರಚಾಪವೆಂಬ ಧನಸ್ಸಿನಲಕ್ಷಣವು)—

ಪರಿವೇಷ ಮತ್ತು ಇಂದ್ರಚಾಪವು ಸಂಭವಿಸಿರುವ ಕಾಲದಲ್ಲಿ ಪಕ್ಷಿಯನ್ನು ಕೇಳದ್ದೇ ಆದರೆ ಸಕಲಕಾರ್ಯಗಳೂ ನಿಷ್ಫಲವಾಗುವುದೆಂದು ತಿಳಿಯಬೇಕಾದ್ದೇ ಮುಖ್ಯವಾದ ಜನಮುನಿಗಳ ಸಮ್ಮತವಾಗಿರುವದೆಂಬ ಭಾವವು.

ಮಳೆಯು ಸುರಿಯುತಲಿರುವ ಸಮಯದಲ್ಲಿ ಪೂರ್ವದಿಕ್ಕಿನಲ್ಲಿ ಇಂದ್ರಚಾಪಉಂಟಾದರೆ ಅತ್ಯಂತವಾಗಿ ಬರುತ್ತಿದ್ದ ಮಳೆಯುಕೂಡ ನಿಮೇಷಮಾತ್ರದಲ್ಲಿ ಕ್ಷಯವಾಗುವುದೆಂತಲೂ, ಮೂರುದಿವಸಗಳ ಪರ್ಯಂತರವೂ ವರ್ಷಯೋಗವು ಕೆಡಮೆಯಾಗುವದೆಂಬದಾಗಿ ತಿಳಿಯಬೇಕು

ಜೇಷ್ಠಮಾಸದಲ್ಲಿ ಪಶ್ಚಿಮದಿಕ್ಕಿನೊಳು ಧನುಸ್ಸುಂಟಾದರೆ ಆದಿನ ಮೊದಲ್ಗೊಂಡು ಮೂರುತಿಂಗಳ ಪರ್ಯಂತರವೂ ಅತಿವೃಷ್ಟಿ ಯುಂಟಾಗಿ ಅರ್ಘವೃದ್ಧಿಗಳೆಲ್ಲಾ ಕುಂದಿ ಪೃಥ್ವೀಮಂಡಲವೆಲ್ಲಾ ಜಲಸಮೃದ್ಧಿಯಾಗುವುದೆಂದು ಭಾವವು.

ಆಷಾಢಮಾಸದೊಳು ಉದಯಕಾಲದಲ್ಲಿ ಪೂರ್ವದಿಗ್ಭಾಗದೊಳು ಇಂದ್ರಚಾಪವು ಕಾಣಿಸಿದರೆ ಅಂದಿನಿಂದ ಎರಡುಮಾಸಗಳು ವರ್ಷಭಾವವಾಗುವುದೆಂದು ಖಂಡಿತವಾಗಿ ತಿಳಿಯಬೇಕು

ಶ್ರಾವಣಮಾಸದಲ್ಲಿ ಸೂರ್ಯೋದಯಕಾಲದೊಳು ಮನ್ಮಥನಚಾಪವುತೋರಲಾಗಿ ಬಂದುತಿಂಗಳ ಪರ್ಯಂತರವೂ ಮಳೆಯು ಬರುವದಿಲ್ಲ. ವೆಂತಲೂ, ಸಂಧ್ಯಾಕಾಲದಲ್ಲಿ ಕಾಣಬಂದರೆ ದೇಶದಲ್ಲಿ ಕಲಹಗಳಧಿಕವಾಗುವು ವೆಂಬದಾಗಿಯೂ ತಿಳಿಯಬೇಕು.

ಪೂರ್ವದಿಕ್ಕಿನಲ್ಲಿ ಧನುಸ್ಸುಂಟಾದರೆ ಅತ್ಯಂತವೃಷ್ಟಿಯು ಮುಂದೆ

ಉಂಟಾಗುವುದೆಂತಲೂ, ವ್ಯತಿರಿಕ್ತವಾಗಿ ಉಂಟಾಗಲು ಪೂರ್ವಮಳೆಯು ಕುಂದಕವಾಗುವು ದೆಂಬದಾಗಿಯು ಅರಿಯತಕ್ಕದ್ದು.

ಇಂದ್ರಚಾಪವು ಉದಯವಾದ ಕಾಲದಲ್ಲಿ ಅದರಭಾಗವು ದಕ್ಷಿಣ ದಿಕ್ಕನ್ನು ಸೇರಿದ್ದರೆ ಕ್ಷಾಮಉಂಟಾಗುವುದು ಉತ್ತರದಿಕ್ಕನ್ನು ಸೇರಿದ್ದಾದರೆ ದೇಶದಲ್ಲಿ ಸುವೃಷ್ಟಿಯಿಂದ ಸಂಪೂರ್ಣಫಲ ವಾಗುವುದು ಉಭಯ ದಿಕ್ಕುಗಳಿಗೂ ಸಮನಾಗಿರುವಂತೆ ಚಾಪ ಉಂಟಾಗಲು ವೃಷ್ಟಿ ಶೂನ್ಯವಾಗಿ ಫಲಾಧಿಕ್ಯ ವಾಗುಉದಿಲ್ಲವು

ಧನುಸ್ಸು ಉದಯಕಾಲದಲ್ಲುಂಟಾಗಲು ಸುವೃಷ್ಟಿಯಿಂದ ಫಲಭರಿತ ವಾಗುವುದು ಮಧ್ಯಾಹ್ನಕಾಲದಲ್ಲಾದರೆ ಅನಾವೃಷ್ಟಿಯಿಂದ ಕ್ಷಾಮ ಸಂಚಕವಾಗುವುದು ಅಸ್ತಮಾನ ಸಮಯದಲ್ಲಾದರ ಡಂಬರವು ರಾತ್ರಿ ಕಾಲದಲ್ಲಾದರೆ ದೇಶವು ಲಯವು ಉಂಟಾಗುವುದು.

—(ಮಂಜಿನ ಸ್ವರೂಪವು )

ಲೋಕದಲ್ಲಿ ವರ್ಷ ಶೂನ್ಯವಾಗಿರುವ ಸಮಯದೊಳು ಮಂಜು ಬಂದು ಕವಿಯಲು ವೃಷ್ಟಿಯೋಗವು ಕಡಮೆಯಾಗುವುದೆಂದು ಸಮಾನ್ಯವಾಗಿ ತಿಳಿಯಬೇಕೆಂಬ ಭಾವವು

ಭೂಮಿಯಲ್ಲಿ ಅಧಿಕವಾಗಿ ವೃಷ್ಟಿಯಾಗುವ ಸಮಯದಲ್ಲಿ ಮಂಜು ಕಾಣಿಸಿಕೊಂಡರೆ ಅತ್ಯಂತವಾದ ಮಳೆಯೇ ಆಗುಉದೆಂತಲೂ ಉದಯಕಾಲಕ್ಕೆ ಪೂರ್ವದೊಳಾಗಲು ನಾಶನವೆಂದು ತಿಳಿಯಬೇಕೆಂಬದಾಗಿಯೂ ಭಾವವು.

ಅನೂರಾಧ, ಜ್ಯೇಷ್ಠ, ಮೂಲ ಈಮೂರು ಮಳೆಗಳು ನಡೆಯುವ ಕಾಲದಲ್ಲಿ ಮಂಜು ಬಂದದ್ದೇ ಆದರೆ ಮುಂದೆ ನಡೆಯುವ ಮಳೆಗಳು ಅತ್ಯಲ್ಪವಾಗಿಯೂ, ತನ್ಮೂಲಕ ಪ್ರಜೆಗಳಿಗೆ ತುಂಬಾ ದುಃಖಕರವಾಗಿಯೂ ಇರುವುದು

ಅನೂರಾಧ, ಜ್ಯೇಷ್ಠ, ಮೂಲ ಈ ಮಳೆಗಳಲ್ಲಿ ವರ್ಷಿಸದೆ ಇರುವ ಕಾಲದಲ್ಲಿ ಮಂಜುಂಟಾಗಲು ಮುಂದೆ ಅತಿವೃಷ್ಟಿಯಾಗುವುದೆಂತಲೂ ಫಲಭರಿತವಾಗುವುದೆಂಬದಾಗಿಯೂ ತಿಳಿಯಬೇಕು.

ಸೂಕ್ಷ್ಮವಾಗಿ ಮಂಜು ಕಾಣಿಸಿಕೊಂಡರೆ ಅತಿವೃಷ್ಟಿಯೂ ಅರ್ಧದಂತೆ ಕಾಣಿಸಿಕೊಂಡರೆ ವರ್ಷವು ಅರ್ಧಭಾಗವು ನಡದು ಫಲವೂ ಅರ್ದಭಾಗವಾಗಿಯೂ ಲೋಕವೆಲ್ಲಾ ಸುಭಿಕ್ಷದಿಂದಲೇ ಇರುತ್ತಾ ಅರಸುಗ

ಳೆಲ್ಲಾ ಅನ್ಯೋನ್ಯ ಮೈತ್ರೀಭಾವದಿಲ್ಲಿರುವುದೆಂತಲೂ ತಿಳಿಯಬೇಕು

—(ಚೈತ್ರಶುದ್ಧ ಪಂಚಮಿ ಸ್ವರೂಪವು)—

ಯಾವ ಸಂವತ್ಸರದಲ್ಲಿಯೇ ಆಗಲಿ ಚೈತ್ರಶುದ್ಧ ಪಂಚಮಿಯು ಸೋಮ, ಗುರು ಈ ವಾರಗಳಲ್ಲಾದರ ಆಸಂವತ್ಸರವೆಲ್ಲಾ ವಿಶೇಷವಾಗಿ ಮಳೆ ಯುಂಟಾಗಿ ಭೂಮಿಯಲ್ಲಾ ಫಲಭರಿತ ವಾಗುವುದೆಂದು ಭಾವವು

ಚೈತ್ರಶುದ್ಧ ಪಂಚಮಿಯು ಬುಧವಾರ ವಾದರೆ ಮಳೆಯು ಅರ್ಧ ಭಾಗ ನಡೆದು ಫಲವೂ ಅರ್ಧವಾಗಿಯೇ ಆಗುವದಲ್ಲದೆ ಅರ್ಧಕ್ಷಾಮಿಯೂ ಉಂಟಾಗುವುದು. ಶುಕ್ರವಾರವು ಪಂಚಮಿಯಿಂದಿರಲು ದೇಶದಲ್ಲಿ ಹವಗ ಟ್ಲೆ ಮಳೆಯಾಗದೆ ಫಲ ನಾಶವಾಗುವುದೆಂದು ತಿಳಿಯತಕ್ಕದ್ದು

ಶನಿ ಅಂಗಾರಕ ಈವಾರಗಳಲ್ಲಿ ಚೈತ್ರಶುದ್ಧ ಪಂಚಮಿಯಾಗಿ ಯೋಗಉಂಟಾಗಲು ಯಾ ಮಳೆಯೂ ಆಗದೆ ಫಲಶೂನ್ಯವಾಗುವುದು

ಪಂಚಮಿಯಲ್ಲಿ ಸೂರ್ಯನು ಸೇರಿದರೆ ಖಂಡವೃಷ್ಟಿಯು ನಡೆಯು ತ್ತಾ ಪ್ರತಿ ಗ್ರಾಮಗಳಲ್ಲಿಯೂ ಪೂರ್ವಭಾಗದ ಭೂಮಿಗಳು ಫಲಶೂನ್ಯ ವಾಗುವುದೆಂದು ತಿಳಿಯಬೇಕು

ಸೂರ್ಯನು ಪಂಚಮಿಯಲ್ಲಿ ಸೇರಿರುವ ಕಾಲವೊಳು ರೋಹಿಣಿ ನ ಕ್ಷತ್ರವು ಸೇರಿದ್ದೇ ಆದರೆ ದೇಶದಲ್ಲೆಲ್ಲಾ ಸುವೃಷ್ಟಿಯುಂಟಾಗುವುದೆಂತ ಲೂ, ಅಂಥಾ ತಿಥಿಯಲ್ಲಿ ಮೃಗಶಿರಾ ಯುಕ್ತವಾದರೆ ಸಕಲವಾದ ಮಳೆಗ ಳೂ ಅರ್ಧವಾಗಿ ನಡೆದು ಫಲವೂ ಅರ್ಧವೆಂದೇ ಭಾವಿಸತಕ್ಕದ್ದು.

ಚೈತ್ರಶುದ್ಧ ಪಂಚಮಿದಿವಸ ಅರ್ದ್ರಾನಕ್ಷತ್ರ ಯೋಗವಾದರೆ ವಿಶಿ ಷ್ಟ ಮಳೆಗಳೂ ಶೂನ್ಯವಾಗುವವು ಈ ಕಾರಣಗಳಿಂದ ಪರಸ್ಪರವಾಗಿ ರಾಜ ಕಲಹಗಳುಂಟಾಗಿ ಕ್ಷಾಮವು ಸಂಭವಿಸಿ ಪ್ರಜಾಕ್ಷಯವೂ ಉಂ ಟಾಗುವುದು.

—(ವೈಶಾಖ ಶುದ್ಧಾಷ್ಟಮಿಯ ಲಕ್ಷಣವು)—

ವೈಶಾಖಮಾಸದ ಶುಕ್ಲಪಕ್ಷದ ಅಷ್ಟಮಿಯು ಶನ್ಯಂಗಾರಕ ವಾರ ಗಳಲ್ಲಾದರೆ ಆ ಕಾಲದಯೋಗಗಳಿಂದ ದೇಶದಲ್ಲಿ ಸುವೃಷ್ಟಿಯುಂಟಾಗದೆ ಫಲಶೂನ್ಯವಾಗಿ ಪಜೆಗಳಿಗೆ ತೊಂದರೆಯೂ ಸಂಭವಿಸುವುದು.

ಚಂದ್ರನಿಗೆ ಲೋಕಸಂಪತ್ತು ಬುಧನಿಗೆ ಕ್ಷಾಮಿಯು, ಬೃಹಸ್ಪತಿಗೆ ಬೆಳೆಯು ಸೂರ್ಯಬುಧರಿಗೆ ಸಾಮಾನ್ಯವೃಷ್ಟಿಯೂ ಈ ರೀತಿಯಾದ ಯೋ ಗಗಳಿರುವುದೆಂದಾಶಯವು.

—(ಜೇಸ್ಥ ಶುದ್ಧ ಪಾಡ್ಯಮಿಯ ಫಲವು.)—

ಜೇಷ್ಠ ಶುದ್ಧ ಪಾಡ್ಯಮಿಯ ತಿಥಿಯಲ್ಲಿ ಮೃಗಶಿರಾ ಆರ್ದ್ರಾ ನಕ್ಷತ್ರಗಳು ಕೂಡಲು ದೇಶವಲ್ಲೆಲ್ಲಾ ಅತ್ಯಂತವಾದ ಮಳೆಯು ಸುರಿದು ಉತ್ತಮವಾದ ಫಲಉಂಟಾಗುವುದೆಂಬ ಭಾವವು.

ಜ್ಯೇಷ್ಠ ಶುದ್ಧ ಪಾಡ್ಯಮಿಯ ದಿವಸ ಭರಣಿ ಕೃತ್ತಿಕಾ ಜ್ಯೇಷ್ಠ ಈ ನಕ್ಷತ್ರಗಳ ಯೋಗಗಳುಂಟಾದಲ್ಲಿ ಭೂತಲದಲ್ಲಿ ಅತ್ಯಲ್ಪವಾದ ಮಳೆಯುಂಟಾಗಿ ಸಸ್ಯಾಭಿವೃದ್ಧಿಗೆ ಕಾರಣವಿಲ್ಲದೆ ಅಗ್ನಿಭಯ ಉಂಟಾಗಿ ಪ್ರಜಾಲಯ ವಾಗುವುದೆಂದರಿಯಬೇಕು

—(ಅಷಾಢಮಾಸದ ಫಲವು.)—

ಆಷಾಡಮಾಸದಲ್ಲಿ ಶುಕ್ಲಪಕ್ಷದ ಪಂಚಮಿಯು ಭಾನುವಾರದಲ್ಲಿ ಸಾಮಾನ್ಯವಾದ ವೃಷ್ಟಿಯಿಂದ ಭೂಮಿಯಲ್ಲಿ ಅರ್ಧಫಲವಾಗುವುದೆಂತಲು ಅದೇ ಪಂಚಮಿಯು ಇಂದುವಾರವಾದ ಪಕ್ಷದಲ್ಲಿ ಸಂಪೂರ್ಣವಾದ ಮಳೆಯುಂಟಾಗಿ ವಿಶೇಷಫಲ ವಾಗುವುದೆಂಬದಾಗಿಯೂ ತಿಳಿಯ ಬೇಕು

ಅಂಗಾರಕವಾರ ವಾದೊಡೆ ದೇಶದಲ್ಲಿ ಯುದ್ಧಬಾಧೆಯು ಬುಧವಾರದಿಂದ ಮಂಗಳವು ದೇವಗುರುವಿನಿಂದ ಉತ್ತಮಫಲವು ಶುಕ್ರವಾರವಾದೊಡೆ ಅತ್ಯಂತವೃಷ್ಟಿಯು ಶನಿವಾರವಾದ ಪಕ್ಷದಲ್ಲಿ ಮಳೆಯೂ ಇಲ್ಲದೆ ಫಲವು ಇಲ್ಲದೆ ಹೋಗುವುದಾಗಿಯು ತಿಳಿಯಬೇಕೆಂದಾಶಯವು

ಆಷಾಢಶುದ್ಧ ದಶಮಿಯ ದಿವಸ ರೋಹಿಣೀ ನಕ್ಷತ್ರದ ಯೋಗವು ಸಂಭವಿಸಿದಲ್ಲಿ ಲೋಕದಲ್ಲೆಲ್ಲಾ ವಿಶೇಷವಾಗಿ ಸುವೃಷ್ಟಿ ಯುಂಟಾಗಿ ಅತ್ಯಂತವಾದ ಫಲಭರಿತವಾಗುವುದೆಂದು ಊಹಿಸಬೇಕು.

ಆಷಾಢಮಾಸದೊಳು ಶುಕ್ಲಪಕ್ಷದ ಏಕಾದಶಿ ತಿಥಿಯಲ್ಲಿ ರೋಹಿಣೀ ನಕ್ಷತ್ರ ಯೋಗಉಂಟಾದರೆ ಸಾಮಾನ್ಯವಾದ ಮಳೆ ಯುಂಟಾಗಿ ಅರ್ಧಭಾಗದ ಫಲ ವಾಗುವುದಲ್ಲದೆ ಪ್ರಪಂಚದಲ್ಲಿನ ಸಕಲಜನರಿಗೂ ನಾನಾವಿಧವಾದ ದುಃಖಗಳುಂಟಾಗುವುವೆಂಬ ಭಾವವು.

ಆಷಾಢ ಶುಕ್ಲಪಕ್ಷದ ದ್ವಾದಶಿ ತಿಥಿಯಲ್ಲಿ ರೋಹಿಣೀ ನಕ್ಷತ್ರ ಯೋಗವು ಸಂಭವಿಸಿದ ಪಕ್ಷದಲ್ಲಿ ಅನಾವೃಷ್ಟಿಯಿಂದ ಯಾವ ಫಲವೂ ಆಗುವುದಿಲ್ಲವು. ಮತ್ತು ದೇಶದಲ್ಲಿರುವ ಅರಸರುಗಳಿಗೆ ಪರಸ್ಪರವಾಗಿ ಕಲಹಗಳುಂಟಾಗಿ ಪ್ರಜೆಗಳಿಗೆಲ್ಲಾ ಕೇಡುಸಂಭವಿಸುವುದೆಂದು ತಾತ್ಪರ್ಯವು.

ಆಷಾಢ ಬಹುಳ ದ್ವಾದಶಿ ತಿಥಿಯಲ್ಲಿ ರೋಹಿಣಿ ನಕ್ಷತ್ರ ಯೋಗ

ವು ಬರಲಾಗಿ ಅಂತ್ಯಮಳೆಯು ಅಂದರೆ ಕಡೆಗಾಲದ ಮಳೆಯುವೂತ್ರ ಹೊಯಿದು ಪೃಥ್ವೀ ಜನಗಳಿಗೆಲ್ಲಾ ಸಕಲವಾದ ಆಸ್ತಿಗಳು ನಾಶವಾಗಿ ಕ್ಷಾಮವೇ ತಲೆದೋರುವುದು

ಆಷಾಢ ಶುದ್ಧ ನವಮಿ ದಿವಸ ಸ್ವಾತೀ ಮಳೆಯ ಯೋಗವಾಗ ಲಾಗಿ ಮಳೆಯು ಅಧಿಕವಾಗಿ ನಡೆಯದೆ ಫಲವೂ ಸಾಮಾನ್ಯವಾಗಿ ನಡೆದು ಹೆಚ್ಚಾದ ಘಾಳಿಯಿಂದ ದೇಶವೆಲ್ಲಾ ಕಷ್ಟದ ದೆಸೆಯಲ್ಲಿರುವುದು

( ಶ್ರಾವಣಮಾಸದ ಫಲವು )

ಶ್ರಾವಣ ಶುದ್ಧ ಚತುರ್ದಶಿಯು ದಿವಸ ಶ್ರವಣ ನಕ್ಷತ್ರ ಯೋಗವಾದರೆ ಮಳೆಯುವಿಶೇಷವಾಗಿಸುರಿಯುವುದು. ಪೌರ್ಣಮಿಯದಿವಸಸೇರಿದ್ದರೆ ಸಾಮಾನ್ಯವಾದ ವೃಷ್ಟಿಯಿಂದ ಸಾಧಾರಣ ಫಲ ವಾಗುವುದು

ಬಹುಳದಲ್ಲಿ ಆ ನಕ್ಷತ್ರವು ಸೇರಿದ್ದೇ ಆದರೆ ಮಳೆ ಬೆಳೆಗಳೆಲ್ಲಾ ಕೆಟ್ಟು ಮರಣಾವಸ್ಥೆಗಳುಂಟಾಗುವುವು. ಮತ್ತು ಸಾಮಾನ್ಯವಾಗಿಮಳೆಯು ಬರುವುದಾದರೂಫಲವಿಲ್ಲದೆ ಅಲ್ಲಲ್ಲಿ ಪ್ರಜಾಕಳಹಗಳುಂಟಾಗುವುವು

( ಭಾದ್ರಪದ ಮಾಸದ ಫಲವು. )

ಭಾದ್ರಪದ ಮಾಸದಲ್ಲಿ ಬೃಹಸ್ಪತಿಯು ಪೂರ್ವದಿಕ್ಕಿನಲ್ಲಿ ಉದಯವಾದವನಾದರೆ ಆದ್ರಾಮಳೆಯಿಂದ ಪುಬ್ಬಾಮಳೆಯ ಪರ್ಯಂತರವೂ ಯೋಗಗಳೆಲ್ಲಾ ಕ್ಷಯಿಸಿ ವರ್ಷಾಭಾವ ವಾಗುವುದು.

(ಆದ್ರಾಪ್ರವೇಶದ ಫಲವು )

ಆದ್ರಾ ನಕ್ಷತ್ರವು ಮಧ್ಯಾಹ್ನಾತ್ಪೂರ್ವದೊಳುದಯವಾದರೆ ಭೂತಳದಲ್ಲಿ ಮಳೆಯು ಕೊಂಚವಾಗಿ ಬೆಳೆಯೂ ಕಡಮೆಯಾಗುವುದು ಮಧ್ಯಾಹ್ನದಮೇಲೆ ಯಾದರೆ ಮಳೆ ಬೆಳೆಗಳೆಲ್ಲಾ ಸಾಮಾನ್ಯ ವಾಗುವುದೆಂದು ಭಾವವು.

ಮೂರನೆಯ ಝಾಮದಲ್ಲಾದರೆ ಭೂತಳದಲ್ಲಿ ವಿಶೇಷವಾಗಿ ಮಳೆಯುಂಟಾಗಿ ಮೂರುಪಾಲು ಬೆಳೆಯಾಗುವುದು ಅರ್ಧರಾತ್ರಿಯೊಳಾದ ಪಕ್ಷದಲ್ಲಿ ಸುವೃಷ್ಟಿ ಯುಂಟಾಗಿ ಫಲ ಸಮೃದ್ಧಿಯಾಗುವುದೆಂಬಭಾವವು.

ಭಾನು, ಶನಿ ವಾರಗಳಾದರೆ ಸಾಮಾನ್ಯವಾದ ಮಳೆಯು ಗುರುವಾರವಾದರೆ ಸುಂಟರುಗಾಳಿಯು, ಅಂಗಾರಕವಾರವಾದರೆ ಸಕಲ ಸಂಪತ್ತುಗಳೂ ಉಂಟಾಗುವುದಾಗಿಯು ತಿಳಿಯಬೇಕು

ಆದ್ರಾ ನಕ್ಷತ್ರದ ಮಳೆಯು ಪ್ರಾರಂಭವಾದಾಗ ಬಂದನೆಯ

ಪಾದದಲ್ಲಿ ಗುಡುಗಿದರೆ ಅಲ್ಲಿಂದ ಐದುಮಳೆಗಳು ಸರಿಯಾಗಿ ನಡೆಯದೆ ಹೋಗುವುವೆಂತಲೂ, ಎರಡನೆಯ ಪಾದದಲ್ಲಿ ಘರ್ಜಿಸಿದರೆ ಸುಂಟರುಗಾಳಿ ಅಧಿಕವಾಗುವುದೆಂಬದಾಗಿಯೂ ಮೂರನಯ ಪಾದದಲ್ಲಿ ಗುಡುಗಿದ್ದೇ ಆದರೆ ಸಂಪೂರ್ಣವಾಗಿ ಮಳೆಯುಂಟಾಗುವುದೆಂತಲೂ ತಿಳಿಯಬೇಕು.

ನಾಲ್ಕನೆಯ ಪಾದದಲ್ಲಿ ಘರ್ಜಿಸಿದರೆ ಖಂಡವೃಷ್ಟಿ ಯುಂಟಾಗುವುದು ಪಾಪಗ್ರಹಗಳ ಸಂಬಂಧದಿಂದ ನಡೆಯಲು ಮಳೆಯು, ಮತ್ತು ಬೆಳೆಯು ನಾಶವಾಗುವುದು. ಶುಭಗ್ರಹಗಳ ಸಂಬಂಧದಿಂದ ನಡೆಯುವುದಾದರೆ ಅತ್ಯಂತವಾದ ಮಳೆ ಯುಂಟಾಗಿ ವಿಶೇಷವಾಗಿ ಫಲ ಭರಿತವಾಗಿರುವುದು,

( ಮೇಷಸಂಕ್ರಾಂತಿಫಲವು. )

ಮೇಷಸಂಕ್ರಾಂತಿಯು ಹಗಲುಕಾಲ ಉದಯವಾದರೆ ಅತ್ಯಲ್ಪವಾದ ಮಳೆಗಳು ನಡೆದು ಅರ್ಘವೃದ್ಧಿಯು ಕುಂದಿ ರತ್ನಾದಿಗಳಿಗೆಲ್ಲಾ ಧಾರಣಿ ವಾಸಿಯಾಗಿರುವುದು

ಮೇಷಸಂಕ್ರಾಂತಿಯು ರಾತ್ರಿಕಾಲದಲ್ಲಾದರೆ ದೇಶದಲ್ಲೆಲ್ಲಾ ವಿಶೇಷವಾದ ವರ್ಷವುಂಟಾಗಿ ಅತ್ಯಂತವಾದ ಫಲಭರಿತವಾಗುವುದು. ಪ್ರಪಂಚದ ಪ್ರಜೆಗಳೆಲ್ಲಾ ವಿಶೇಷವಾದ ಸುಖಾನುಭವ ವುಳ್ಳವರಾಗಿರುವರು

( ಮಕರಸಂಕ್ರಾಂತಿಯಫಲವು. )

ಸೂರ್ಯನು ಮಕರರಾಶಿಯನ್ನು ಪ್ರವೇಶಿಸಿದರೆ ಆ ಕಾಲಕ್ಕೆ ಮಕರಸಂಕ್ರಾಂತಿಯೆಂದು ನಾಮಧೇಯ ವುಂಟಾಗುವುದು. ಅಂಥಾ ಮಕರಸಂಕ್ರಾಂತಿಯು ಪುಷ್ಯಮಾಷದ ಕೃಷ್ಣ ಪಕ್ಷದಲ್ಲಿ ವುಂಟಾದರೆ ದೇಶದಲ್ಲೆಲ್ಲಾ ಅತ್ಯಂತವಾದ ಮಳೆಯುಂಟಾಗಿ ಉತ್ತಮವಾದ ಫಲಗಳುಂಟಾಗುವುವೆಂದು ಭಾವವು.

ಅದೇಪುಷ್ಯಮಾಷದ ಶುಕ್ಲಪಕ್ಷದಲ್ಲ ಮಕರಸಂಕ್ರಾಂತಿಯು ಹಗಲು ಕಾಲದಲ್ಲಾದರೆ ಸಾಮಾನ್ಯವಾದ ಮಳೆಯುಂಟಾಗುವುದಲ್ಲದೆ ಫಲವೂ ಕುಂದುವುದು. ಮತ್ತು ಪ್ರಪಂಚವಲ್ಲೆಲ್ಲಾ ಪ್ರಜಗಳಿಗೆ ಅನ್ಯೋನ್ಯವಾಗಿ ಭಯೋತ್ಪಾತಗಳುಂಟಾಗುವುವಲ್ಲದೆ ಜನಾಂಗವೂಲಯವಾಗುವುದು.

( ಗ್ರಹಣದಫಲವು. )

ಶ್ರಾವಣ, ಭಾದ್ರಪದ, ಫಾಲ್ಗುನ, ಮಾಘ ಈಮಾಸಗಳಲ್ಲಿ ಸೂರ್ಯಗ್ರಹಣವು ಬಂದರೆ ದೇಶದಲ್ಲಿಮಳೆಯು ಮತ್ತು ಬೆಳೆಯು ಸಾಮಾನ್ಯವಾಗಿ ನಡೆದು ಜನಗಳಿಗೆ ಮಾತ್ರ ತೊಂದರೆಯಾಗಿರುವುದು.

ಬಂದೇಮಾಸದಲ್ಲಿ ಚಂದ್ರಸೂರ್ಯರಿಬ್ಬರ ಗ್ರಹಣಗಳೂ ಬಂದರೆ ಆ ಸಂವತ್ಸರಫಲವು ಸಾಮಾನ್ಯವಾಗಿರುವುದಲ್ಲದೆ ಕ್ಷಾಮಡಂಬರವು ತೋರ ಲ್ಪಟ್ಟ ಪ್ರಜೆಗಳು ಹರಿಗೋಲಿನಂತೆ ತಿರುಗುತಲಿರುವುರು

ಒಂದು ಏಳು, ಎಂಟು ಈ ಮಾಸಗಳಲ್ಲಿ ಚಂದ್ರಗ್ರಹಣವಾದರೆ ಆ ಸಂವತ್ಸರ ವಿಶೇಷವಾಗಿ ಮಳೆಯುಂಟಾಗಿ ಬೆಳೆಯು ಸಮೃದ್ಧಿಯಾಗುವುದು ಮತ್ತು ದೇಶದಲ್ಲಿ ಅರಸು ಯುದ್ಧರಂಗದಲ್ಲಿ ಜಯವಂಹೊಂದಿ ಅಮರಾಪುರಿಯಂತೆ ರಾಜ್ಯಭಾರವಂ ಮಾಡುವುನು

ಎರಡು ಎಂಟು ಈ ಮಾಸಗಳಿಗೆ ಚಂದ್ರಗ್ರಹಣವಾದರೆ ಆ ಸಂವತ್ಸರದಲ್ಲಿ ಅತ್ಯಲ್ಪವಾದ ಮಳೆಯಿಂದ ಫಲಶೂನ್ಯವಾಗಿ ದೇಶದಲ್ಲಿನ ಭಾಗ್ಯವಂತರುಕೂಡ ದಾರಿದ್ರವನ್ನೈದುವುರು.

ಮೂರು ನಾಲ್ಕು ಏಳು ಈ ಮಾಸಗಳಿಗೆ ಚಂದ್ರಗ್ರಹಣವಾಗಲು ವಿಶೇಷವಾದ ಮಳೆಯುಂಟಾಗಿ ಫಲಾಧಿಕ್ಯವಾಗುವುದು ಆದರೆ ಸಂವತ್ಸರಾಂತ್ಯದಲ್ಲಿ ಪ್ರಜೆಗಳಿಗೆ ಕಷ್ಟವು ಸಂಭವಿಸುವುದು.

—(ಗ್ರಹಸಿದ್ಧಿಯೋಗವು.)—

ಶನಿಯು ಅಂಗಾರಕನು ಇವರೀರ್ವರೂ ಏಕತ್ರಸಂಚರಿಸುತಲಿರುವಂಥಾವರಾದರೆ ಧರಣಿಯೊಳು ವೀರಕ್ಷಾಮವು ಸಂಭವಿಸಿ ರಾಜ್ಯದ ಅರಸರುಗಳಿಗೆ ಪರಸ್ಪರ ಕಲಹಗಳುಂಟಾಗುವುದು

ಬೃಹಸ್ಪತಿಯು ಶುಕ್ರನು ಬುಧನು ಇವರೆಲ್ಲಾ ಒಂದಾಗಿ ಸೇರಿರಲು ಅತಿವೃಷ್ಟಿಯುಂಟಾಗುವುದು. ಇವರ ಸಂಗಡ ಶನ್ಯೈಶ್ವರನು ನಡೆಯುವವನಾದರೆ ವೀರಕ್ಷಾಮವು ತಲೆದೋರಿ ಕಡೆಗೆ ನಾನಾವಿಧಗಳಾದ ತೊಂದರೆಗಳುಂಟಾಗುವುವು.

ಶನಿಯು ಸೂರ್ಯನೊಡನೆ ಸೇರಿರುವಾಗ ಬೃಹಸ್ಪತಿಯು ಬಂದವನಾಗಲು ಭೂಮಂಡಲದಲ್ಲೆಲ್ಲಾ ವೀರಕ್ಷಾಮದಿಂದ ಜಲವೆಲ್ಲಾ ಶೋಷಿಸಿ ಅರ್ಘವೃದ್ಧಿಯು ಲವನ್ನೈದುವುದು

ಶುಕ್ರನು ಬುಧನಸಂಗಡಸೇರಲು ವಿಶೇಷವಾದ ವರ್ಷಯೋಗವುಂಟಾಗುವುದು ಚಂದ್ರನು ಸೇರಿದ್ದೇಆದರೆ ನಾನಾವಿಧಗಳಾದ ತೊಂದರೆಯು ತಪ್ಪದು ಮತ್ತು ಶುಕ್ರನು ಸ್ವಾತೀನಕ್ಷತ್ರವನ್ನು ಸೇರಿದವನೇ ಆದರೆ ಅಪಾರವಾದ ವೃಷ್ಟಿಪ್ರದವೆಂದು ತಿಳಿಯಬೇಕು.

ಬೃಹಸ್ಪತಿಯು ಚಂದ್ರನು ಶುಕ್ರನೊಡನೆ ಸೇರಿದ್ದೇ ಆದರೆ ಸಕಲ

ವಾದ ಜಗತ್ತಿನಲ್ಲಿಯೂ ಕ್ಷಾಮಾಧಿಕ್ಯವಾಗಿ ಅರಸರುಗಳೆಲ್ಲಾ ಪರಸ್ಪರ ಯುದ್ಧಾಭಿಮುಖಿಗಳಾಗಿರುವುರು

ಬೃಹಸ್ಪತಿಯಿರುವ ಲಗ್ನಕ್ಕೆ ಐದು ಮತ್ತು ಒಂಭತ್ತನೆಯ ಸ್ಥಾನಗಳಲ್ಲಿ ಶನಿಯು ಇರುವನಾದರೆ ಅತಿಶಯವಾದ ವರ್ಷವುಂಟಾಗುವುದು. ಆರು ಏಳು ಹತ್ತನೆ ಸ್ಥಾನಗಳಲ್ಲಿ ಆ ಶನಿಯು ಇರುತ್ತಿದ್ದರೆ ಕೆಲವು ದೇಶಗಳಲ್ಲಿ ಕ್ಷಾಮುಬಾಧೆಯುಂಟಾಗುವುದು

ವೃಶ್ಚಿಕ ಧನುಸ್ಸು ಮಕರ ಕುಂಭ ಈರಾಶಿಗಳಲ್ಲಿ ಸೂರ್ಯನು ಶನಿಯು ಶೌರಿಯು ಇರುತ್ತಿರಲು ಪ್ರಪಂಚದಲ್ಲೆಲ್ಲಾ ಕ್ಷಾಮಾಧಿಕ್ಯವಾಗುವುದರಲ್ಲಿ ಸಂದೇಹವಿಲ್ಲವು

ತುಲಾ ವೃಶ್ಚಿಕ ವೃಷಭ ಮೀನ ಈ ರಾಶಿಗಳಲ್ಲಿ ಶನಿಯು ನೆಲಸಿದವನಾದರೆ ಜಗತ್ತಿನಲ್ಲಿ ಜಲವೆಲ್ಲಾ ಶೋಷಿಸಿಹೋಗಿ ಕ್ಷಾಮುಬಾಧೆಯುಂಟಾಗುವುದಲ್ಲದೆ ಸುವರ್ಣಗಳು ಅಪ್ಪಾಧಿಸಲ್ಪಡುವುವು.

ಶನ್ಯಂಗಾರಕರುಮುಂದೆ ಸಂಚರಿಸುತಲಿರಲಾಗಿ ವೃಷ್ಟಿಶೂನ್ಯವಾಗುವುದು ಸೂರ್ಯನು ಬುಧನು ಇವರುಗಳ ಚಾರದಲ್ಲಿ ತದರ್ಧವಾಗುವುದು ಗುರು ಶುಕ್ರ ಶನಿ ಇವರುಗಳ ಚರಣದಲ್ಲಿ ಸಂಪೂರ್ಣವೃಷ್ಟಿಯಾಗುವದು

ಬೃಹಸ್ಪತಿಯು ಶನಿಯು ಇವರೀರ್ವರು ಮೀನರಾಶಿಯಲ್ಲಿದ್ದರೆ ಮೂರುವರ್ಷಗಳು ಕ್ಷಾಮುವೆಂದು ನಿಜವಾಗಿ ತಿಳಿಯತಕ್ಕದ್ದು. ಆದುದರಿಂದ ಬುದ್ಧಿಮಂತರಾದ ಪ್ರಜೆಗಳು ಸಂಗ್ರಹಿಸಿಟ್ಟಿರುವ ದಿವಸಗಳನ್ನೆಲ್ಲಾ ತನುಜಗಳಿಗೆ ತುಂಬಿರಬೇಕೆಂದಾಶಯವು

ಬೃಹಸ್ಪತಿಯಿರುವ ಸ್ಥಾನಕ್ಕೆ ಏಳನೆಯರಾಶಿಯಲ್ಲಿ ಶನಿಯು, ಶನಿಗೆ ಬೃಹಸ್ಪತಿಯು ಏಳನೆಯ ಸ್ಥಾನದಲ್ಲಿಯು ಈರೀತಿಯಾಗಿರುತ್ತಿದ್ದರೆ ಜಗತ್ತಿನಲ್ಲಿ ಕ್ಷಾಮವು ತಲೆದೋರಿ ರಾಜಯುದ್ಧಗಳುಂಟಾಗುವುವಲ್ಲದೆ ಸಾಮಾನ್ಯವೃಷ್ಟಿಯೂ ಬರುವುದಿಲ್ಲವೆಂಬ ಭಾವವು

ಶನಿ ಇರುವ ಸ್ಥಾನದಿಂದ ನಾಲ್ಕು ಆರು ಏಳು ಈ ರಾಶಿಗಳಲ್ಲಿ ಅಂಗಾರಕನಿದ್ದರೆ ಆ ಸಂವತ್ಸರವೆಲ್ಲಾ ಮಳೆಯಿಲ್ಲದಯೇ ಜನಗಳೆಲ್ಲಾ ನಾನಾಪ್ರಕಾರವಾದ ದುಃಖಗಳ ನನುಭವಿಸುವರೆಂದು ತಿಳಿಯಬೇಕು

ಯಾವಲಗ್ನದಲ್ಲಿ ಸೂರ್ಯನು ಶನಿಯಿಂದ ಸಹಿತನಾಗುವನೊ ಆಲಗ್ನಕ್ಕೆ ಏಳನೆಯ ಸ್ಥಳದಲ್ಲಿ ಅಂಗಾರಕನಿದ್ದರೆ ಆಸಂವತ್ಸರ ಕಾಲಕಾಲಕ್ಕೆ ಮಳೆಗಳು ಬಾರದೆಬಾಳೆ ಮೊದಲಾದವುಗಳಲ್ಲಾ ಕ್ಷೀಣವಾಗುವವು.

ಏಳನೆಯದೃಷ್ಟಿಗೆ ಶನಿಯು ಇರುತ್ತಿರಲಾಗಿ ಅನಾವೃಷ್ಟಿಯಿಂದ ಸಕಲ ಫಲಗಳು ಲಯವನ್ನೈದಿ ಅಂತ್ಯಭಾಗದಲ್ಲಿ ಪ್ರಜಾಕ್ಷೇಮವುಉಂಟಾಗುವದು.

ಶುಕ್ರನು ಬೃಹಸ್ಪತಿಗೆ ಏಳನೆದೃಷ್ಟಿಗೆ ಇರುವನಾದರೆ ಸಂಪೂರ್ಣ ವೃಷ್ಟಿಯುಂಟಾಗುವದು ಇದೇ ಪ್ರಕಾರ ಬುಧನಿದ್ದರೆ ಅತ್ಯಂತವಾದ ಘಾಳಿಯು ಸೂರ್ಯದೃಷ್ಟಿಯಾಗಲು ಆ ಸಂವತ್ಸರ ಅರ್ಧಮಳೆಯುಂಟಾಗುವದೆಂದು ತಿಳಿಯಬೇಕು.

ಎರಡು ಆರನೆ ಸ್ಥಾನಗಳ ದೃಷ್ಟಿಗಳಲ್ಲಿ ಚಂದ್ರನಿದ್ದರೆ ನಿರಂತರವು ಜಡಿಮಳೆಯುಂಟಾಗುವದು ನಾಲ್ಕುಎಂಟನೆಸ್ಥಳಗಳಲ್ಲಿ ನಿಂತರೆ ಆ ವರುಷವೆಲ್ಲಾ ಮಳೆಯೇ ಬರುವದಿಲ್ಲವೆಂದು ಭಾವವು.

—(ಮಖಾನಕ್ಷತ್ರ ಘರ್ಜನ ಪಲವು )—

ಮಖಾನಕ್ಷತ್ರದ ಪ್ರಥಮಪಾದದಲ್ಲಿ ಮೇಘ ಗರ್ಜನವಾದರೆ ಚಿತ್ತಾಮಳೆಯ ಪರ್ಯಂತರವೂ ಸಂಪೂರ್ಣ ಮಳೆಯಾಗುವದು ಎರಡನೆಯ ಪಾದದಲ್ಲಾ ಪ್ರಕಾರ ಘರ್ಜಿಸಿದರೆ ಅರ್ಧವೃಷ್ಟಿಯುಂಟಾಗಿ ಲೋಕದಲ್ಲಿ ಸಂಪತ್ತು ಶೂನ್ಯವಾಗುವದಿಲ್ಲವೆಂದಾಶಯವು.

ಮೂರನೆಯ ಪಾದದಲ್ಲಿ ಗುಡುಗಿದರೆ ಮಳೆಯು ಅಲ್ಪವೆಂತಲೂ ನಾಲ್ಕನೆಯ ಪಾದದಲ್ಲಿ ಗುಡುಗಲು ಮಳೆಯು ಯಾವ ದೇಶದಲ್ಲಿಯೂ ಆಗುವದಿಲ್ಲವೆಂಬದಾಗಿಯು ಸ್ವಾತೀ ನಕ್ಷತ್ರದಲ್ಲಿ ಗುಡುಗಿದ್ದೇ ಆದರೆ ಜ್ಯೇಷ್ಠಾಮಳೆಯ ಅಂತ್ಯದವರಿಗೂ ಸುವೃಷ್ಟಿಯಾಗುವದೆಂದುಅರಿತಿರಬೇಕು.

—(ಭೂಕಂಪನಫಲವು. )—

ಪೂರ್ವಭಾಗದಲ್ಲಿ ಭೂಮಿಯು ಘರ್ಜಿಸಿದರೆ ಜಗತ್ತಿನಲ್ಲೆಲ್ಲಾ ಪ್ರಜೆಗಳು ದ್ರೋಹಿಗಳಾಗುವರು. ಮತ್ತು ಅಂಥಾ ಪ್ರಜೆಗಳೆಲ್ಲಾ ಅಂತ್ಯಭಾಗಕ್ಕೆ ಕಡುಕಷ್ಟ ಪಡುವಂಥವರಾಗಿ ಕ್ಷಾಮದಿಂ ಪೀಡಿಸಲ್ಪಡುತ್ತಲಿರುವರು.

ದಕ್ಷಿಣಭಾಗದಲ್ಲಿ ಭೂಕಂಪನವಾದರೆ ಪಕ್ಷಿಗಳಿಗೆಕೂಡ ನೀರಿಗೆ ಮಾರ್ಗವಿಲ್ಲದೆ ಘೀರಕ್ಷಾಮವು ಸಂಭವಿಸಿ ಜಗತ್ತಿನ ಜನರೆಲ್ಲಾ ಜನರನ್ನೇ ತಿನ್ನುತ್ತಾ ಪಶುವರ್ಗವೆಲ್ಲಾ ಮೃತಿಯನ್ನೈದುವವು

ಪಶ್ಚಿಮ ಭಾಗದಲ್ಲಿ ಕಂಪಿಸಿದರೆ ಜಗತ್ತಿನಲ್ಲಿರುವ ಧರ್ಮಗಳೆಲ್ಲಾ ಕೆಟ್ಟುಹೋಗುವವಲ್ಲದೆ ಅತಿ ಶೀಘ್ರವಾಗಿ ಕ್ಷಾಮವು ತೋರಲ್ಪಟ್ಟು

ಗ್ರಾಮಪುರಗಳೆಲ್ಲಾ ಹಾಳಾಗಿಹೋಗುವುವು

ಭೂಮಿಯು ಉತ್ತರಭಾಗದಲ್ಲಿ ಗುಡುಗಿದರೆ ಸಕಲ ಧಾನ್ಯಗಳೂ ಬತ್ತಿಹೋಗುವುವಲ್ಲದೆ ಸಂಪತ್ತುಮಾತ್ರ ತಪ್ಪದೆ ಸಜ್ಜನರಿಗೆ ಬಾಧೆಯು ದುರ್ಜನರಿಗೆ ಸಂಪದವೂ, ರಾಜನಿಗೆ ಹಾನಿಯೂ ವುಂಟಾಗುವುದು.

ಭೂಮಿಯು ಸೂರ್ಯೋದಯ ಕಾಲದಲ್ಲಿ ಗುಡುಗಿದರೆ ಯುದ್ಧಗಳಿಂದ ಅರಸರುಗಳಿಗೆ ವಂಶಶೂನ್ಯವಾಗುವುದಲ್ಲದೆ ಯಿರುವ ರಾಜ್ಯವೆಲ್ಲ ಅರಣ್ಯದ ಪಾಲಾಗುವುದೆಂದು ತಿಳಿಯಬೇಕು, ಅಂದರೆ ರಾಜ್ಯವೆಲ್ಲಾ ಹಾಳಾಗುವುದೆಂಬ ಭಾವವು.

ಮಧ್ಯಾಹ್ನ ಸಮಯದಲ್ಲಿ ಭೂಮಿಯು ಘರ್ಜಿಸಿದರೆ ಯಾವದೊಂದೂ ಕಡೆಯಿಲ್ಲದೆ ವೀರಕ್ಷಾಮವು ಅತಿ ಶೀಘ್ರವಾಗಿ ಬರುವುದೆಂತಲೂ ಪೃಥ್ವೀಪಾಲರೆಲ್ಲಾ ನಾನಾವಿಧಗಳಾದ ರೋಗಗಳನ್ನನುಭವಿಸುತ್ತಾ ಶೀಘ್ರದಿ ಮರಣವನ್ನೈದಿ ಪ್ರಜೆಗಳಿಗೆಲ್ಲಾ ಕೇಡು ಸಂಭವಿಸುವುದೆಂಬದಾಗಿಯೂ ಅರಿಯಬೇಕು

ಸಂಧ್ಯಾಕಾಲಗಳಲ್ಲಿ ಭೂಮಿಯು ಗುಡುಗಿದ್ದೇ ಆದರೆ ರಾಜಪತ್ನಿಯರೆಲ್ಲಾ ಅನ್ಯರಕ್ಕೈಗೆಸಿಕ್ಕಿ ಸೆರೆಯಂಸೇರ್ದು ಜಗತ್ತೆಲ್ಲಾ ನಾಶವಾಗುವುದೆಂದು ಭಾವವು.

ರಾತ್ರಿಕಾಲದಲ್ಲಿ ಭೂಕಂಪನ ವಾದರೆ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ವರ್ಣದವರೂ ಮರಣವನ್ನೈದುವುರಲ್ಲದೆ ದುಷ್ಕರ್ಮಾಭಿವೃದ್ಧಿಯಿಂದ ಸಕಲಪ್ರಜೆಗಳಿಗೂ ನೇತ್ರಗಳಲ್ಲಿ ಜಲಪ್ರಳಯವಾಗುವುದು

ಕ್ರೂರವಾದ ವಾರಗಳಲ್ಲಿ ಭೂಮಿಯು ಗುಡುಗಿದರೆ ಮೂರುವರ್ಷಗಳ ಪರ್ಯಂತರವೂ ಘಲವುಲಯವಾಗುವುದು ಶುಭವಾರಗಳಲ್ಲಿ ಘರ್ಜಿಸಿದರೆ ಐದಾರುವರುಷಗಳು ಸಾಮಾನ್ಯಘಲಗಳಾಗುವದೆಂದುತಿಳಿಯಬೇಕು

ಭೂಮಿಯು ಘರ್ಜಿಸಿದ ಸಂವತ್ಸರದಲ್ಲಿ ಮಳೆಯು ಸ್ವಲ್ಪವಾಗಿ ಹೊಯ್ದು ಬೆಳೆಗಳು ಸಾಮಾನ್ಯವಾಗಿ ಕೈಸೇರುವುದಲ್ಲದೆ ಕ್ಷಾಮಬಾಧೆಯೇ ಬಲವಾಗಿರುವುದೆಂದು ಮುಖ್ಯವಾಗಿ ತಿಳಿಯತಕ್ಕ ಭಾವವು.

—(ಧೂಮಕೇತುವಿನ ಘಲವು)—

ಪೂರ್ವದಿಕ್ಕಿನಲ್ಲಿ ಧೂಮಕೇತುವು ಕಾಣಿಸಿದ್ದೇ ಆದರೆ ಆಮುಂದಣ ಸಂವತ್ಸರಕ್ಕೆ ತಮ್ಮ ತಮ್ಮ ಮಕ್ಕಳುಗಳನ್ನೇ ವಿಕ್ರಯ ಮಾಡಿಕೊಂಡು ಪ್ರಜೆಗಳು ಜೀವಿಸ ಬೇಕಾಗಿರುವದೆಂದು ಸಂಶಯವಿಲ್ಲದೆ ಅರಿಯ

ಬೇಕಾಗಿರುವದು.

ದಕ್ಷಿಣದ ದಿಕ್ಕಿನಲ್ಲಿಯೂ, ಆಗ್ನೇಯ ದಿಕ್ಕಿನೊಳಗೂ ಧೂಮಕೇತುವು ಕಾಣಬಂದರೆ ಪ್ರಪಂಚದಲ್ಲಿರುವ ಆನೆಗಳು, ಕುದುರೆಗಳು, ದನಕರುಗಳು ಮತ್ತು ಮನುಷ್ಯರು ಯಿವುಗಳೆಲ್ಲ ನಮನಾಗಿ ಯಮನ ಪಟ್ಟಣಕ್ಕೆ ತೆರಳುವದರಲ್ಲಿ ಸಂದೇಹವಿಲ್ಲವು.

ನೈರುತ್ಯದಿಕ್ಕಿನಲ್ಲಿಯು, ಪಶ್ಚಿಮದಿಶಿಯಲ್ಲಿಯು ಧೂಮಕೇತುವುಂಟಾದರೆ ಜಗತ್ತಿನಲ್ಲಿ ಅತ್ಯಂತವಾದ ಮಳೆಯುಂಟಾಗಿ ಪ್ರಳಯಕಾಲದಂತೆ ವಿಪತ್ತುಗಳು ಸಂಭವಿಸುವುವಲ್ಲದೆ ಪ್ರಜೆಗಳೆಲ್ಲ ದುಷ್ಕರ್ಮರತರಾಗಿ ತಿರಿಯುವುದರಲ್ಲಿರುವರು-

ವಾಯುವ್ಯದಿಕ್ಕಿನಲ್ಲಿ ಧೂಮಕೇತುವು ಉದಯವಾದರೆ ಅಪರಿಮಿತವಾದ ಕ್ಷಾಮಡಂಬರಗಳುಂಟಾಗಿ ರಾಜರುಗಳಿಗೆಲ್ಲ ವಿಪತ್ತು ಸಂಭವಿಸಿ ಅಬಲೆಯರೆಲ್ಲ ಪರರಿಂದ ಸಂಗ್ರಹಿಸಲ್ಪಡುವುರೆಂದು ತಿಳಿಯಬೇಕು

ಉತ್ತರದಿಕ್ಕಿನಲ್ಲಿ ಯಿದ್ದದ್ದೇಆದರೆ ಅತ್ಯಂತವಾದ ಸುವೃಷ್ಟಿಯಿಂದ ಫಲಾಧಿತ್ಯವಾಗಿ ಜನಗಳಿಗೆಲ್ಲ ಸುಖಾನುಕೂಲ್ಯವುನಂಭವಿಸಿ ರಾಜಪೀಡೆಯು ಮಾತ್ರ ಬಾಧಿಸುತಲಿರುವುದು

ಈಶಾನ್ಯದಿಕ್ಕಿನಲ್ಲಿ ಧೂಮಕೇತುವು ಉದಯವಾದರೆ ಅಂದಿನಿಂದ ಮೂರುವರುಷಗಳು ತಪ್ಪದೆ ಕ್ಷಾಮವು ನಂಭಮಿವದೆಂತಲೂ, ಪ್ರಜೆಗಳೆಲ್ಲ ಈ ಕ್ಷಾಮಬಾಧಾ ನಿವೃತ್ತಿಗೋಸ್ಕರ ತಮ್ಮ ತಮ್ಮ ಮಕ್ಕಳುಗಳನ್ನೇ ಮಾರಿಕೊಂಡು ಕಡುಕಷ್ಟ ಜೀವಿತರಾಗುವರು

ಧೂಮಕೇತುವು ಉದಯವಾದ ಕಾಲದಲ್ಲಿ ಕೆಂಬಣ್ಣವಾಗಿದ್ದರೆ ದೇಶದ ಅರಶಿನ ದರ್ಪವೆಲ್ಲ ನಾಶನವನ್ನೈದಿ ಊರು ಪಟ್ಟಣಗಳೆಲ್ಲ ನಾಶವಾಗುವವು ಬಿಳೀವರ್ಣದಿಂದ ಯಿದ್ದದ್ದೇ ಆದರೆ ಜನಾಂಗಗಳಿಗೆಲ್ಲ ಬಾಧಕವೆಂದು ತಿಳಿಯಬೇಕು

ಧೂಮಕೇತುವು ಹಳದೀಬಣ್ಣ ಉಳ್ಳದ್ದಾಗಲು ವೈಶ್ಯವರ್ಣದವರಿಗೆಲ್ಲ ನಾಶನಕರವೆಂತಲೂ, ನೀಲಮೇಘದವರ್ಣವುಳ್ಳದ್ದಾಗಲು ಶೂದ್ರಜಾತಿಯವರಿಗೆ ಹಾನಿಯು ಸಂಭವಿಸುವದೆಂತಲೂ ಭಾವಿಸಬೇಕು

ಧೂಮಕೇತುವು ಹಗಲುಕಾಲದಲ್ಲಿ ಯೇಳಲು ದೇಶದ ಅರಸಿಗೆ ಹಾನಿಯುಂಟಾಗುವದಲ್ಲದೆ ರಾತ್ರಿಕಾಲದಲ್ಲಿ ಉದಯವಾದ ಪಕ್ಷದೊಳು ದೇಶವಲ್ಲಲ್ಲಾ ನಿರಕ್ಷಾಮಡಂಬರವುಂಟಾಗುವದು

ಧೂಮಕೇತುವು ಪಾಪಗ್ರಹಗಳ ವಾರಗಳಲ್ಲಿ ಉದಯಿಸಿದರೆ ಮೂರುವರುಷಗಳ ಫಲಗಳು ಮೇಲೆ ಹೇಳಿದಂತ ಉಂಟಾಗುವವೆಂತಲೂ, ಶುಭವಾರಗಳಲ್ಲಿ ಉದಯವಾದರೆ ಐದುವರುಷಗಳ ಫಲಗಳು ಸಂಭವಿಸುವವೆಂಬದಾಗಿಯೂ ತಿಳಿಯಬೇಕು.

ಭರಣಿ, ಕೃತ್ತಿಕಾ,ಆಶ್ಲೇಷಾ ಈ ನಕ್ಷತ್ರಗಳಲ್ಲಿ ಧೂಮಕೇತುವು ಉದಯವಾದರೆ ಪ್ರಪಂಚದ ಜನರೆಲ್ಲ ಅತಿ ಶೀಘ್ರವಾಗಿ ಯಮನ ನಗರಿಯದರ್ಶನಕ್ಕೆ ತೆರಳುವುರೆಂದು ಭಾವವು.

—( ಬಾಲನಕ್ಷತ್ರದ ಲಕ್ಷಣವು )—

ಬಾಲನಕ್ಷತ್ರವು ಪೂರ್ವಾಭಿಮುಖವಾಗಿ ಉದಯವಾದರೆ ದೇಶದ ಧೊರೆಯು ತೀವ್ರದಿಂದ ಮೃತಿಯನ್ನೈದಿ ತನ್ಮೂಲಕ ಪ್ರಜೆಗಳಿಗೆ ಅನರ್ಥವುಸಂಭವಿಸುವುದೆಂಬಾಶಯವು.

ದಕ್ಷಿಣದಿಙ್ಮುಖವಾಗಿ ಬಾಲಚುಕ್ಕೆಯು ಉರಿಯುವದಾದರೆ ಭೂಮಿಯಲ್ಲಿ ವೀರಕ್ಷಾಮವು ಸಂಭವಿಸಿ ಅರ್ಧಜನರೆಲ್ಲ ಲಯವನ್ನೈದಿ. ದೇಶದ ನೃಪತಿಗಳು ರಣಭೂಮಿಯಲ್ಲಿ ಲೋಕಾಂತವನ್ನೈದುವರೆಂದು ತಿಳಿಯಬೇಕು.

ಬಾಲಚುಕ್ಕೆಯು ಪಶ್ಚಿಮ ದಿಙ್ಮುಖವಾಗಿ ಉರಿಯುತ್ತಲಿದ್ದರೆಭೂಮಿಯಲ್ಲಿರುವ ಊರುಗಳು, ಪಟ್ಟಣಗಳು, ಪರ್ವತಗಳು ಯಿವು ಮೊದಲಾದವಗಳೆಲ್ಲ ಲಯವನ್ನೈದುವವು ಆ ಸಮಯದಲ್ಲಿ ಪಶ್ಚಿಮದಿಕ್ಕಿನ ಘಾಳಿಯು ಬೀಸುವದಾದರೆ ಸಕಲಜನರೂ ರೋಗಪೀಡಿತರಾಗಿರುವರೆಂದು ಭಾವವು

ಉತ್ತರದಿಕ್ಕಿನಲ್ಲಿ ಬಾಲಚುಕ್ಕೆಯು ಪ್ರಜ್ವಲಿಸುವದಾದರೆ ಲೋಕದಲ್ಲೆಲ್ಲಾ ಗಾಢಾಂಧಕಾರವು ಕವಿದುಕೊಂಡು ಅತ್ಯಂತವಾದ ವೃಷ್ಟಿಯಿಂದ ಸಕಲ ಧಾನ್ಯಗಳೂ ಫಲಿಸುವವೆಂದು ತಿಳಿಯಬೆಕು

ಬಾಲಚುಕ್ಕೆಯುಬಂದು ಉದಯವಾದರ ಪ್ರಜಾನಷ್ಟವೂ, ಎರಡುಡಯಿಸಿದರೆ ಕ್ಷಾಮಡಂಬರವು, ಮೂರು ಏಕಕಾಲದಲ್ಲಿ ಉದವಾದರೆ ಸಕಲ ದೇಶಗಳನಾಶವೂ ಉಂಟಾಗುವದು

ಬಾಲಚುಕ್ಕೆಯು ಬಿಳೀವರ್ನವಾಗಿರಲು ಉತ್ತಮವರ್ನದವರಾದ ಬ್ರಾಹ್ಮಣರಿಗೆ ವಿಪತ್ತು ಸಂಭವಿಸುವದೆಂತಲೂ, ಕೆಂಪಾಗಿದ್ದರೆ ರಾಜಪುತ್ರರಿಗೆ ಹಾನಿಯೆಂಬದಾಗಿಯೂ, ಹಸರು ಬಣ್ಣದಿಂದಿರಲು ವೈಶ್ಯರಿಗೆ ಕೇ

ಹುಂಟಾಗುವದೆಂಬದಾಗಿಯೂ, ಕರೀವರ್ಣವುಳ್ಳದ್ದಾದರೆ ಸಕಲ ಶೂದ್ರರಿಗೂ ವಿಪತ್ತು ಸಂಭವಿಸುವದೆಂತಲೂ ತಿಳಿಯಬೇಕು

—(ಕೆಮ್ಮುಗಿಲಿನ ಫಲವು)—

ಸೂರ್ಯ್ಯೋದಯಕಾಲದಲ್ಲಿ ಅಂತರಿಕ್ಷದೊಳು ಕೆಮ್ಮುಗಿಲು ಉಂಟಾದರೆ ಅತಿ ಶೀಘ್ರದಿಂದ ಉತ್ತಮವಾದ ಮಳೆಯು ಬರುವದೆಂತಲು ಸಂಧ್ಯಾಕಾಲದಲ್ಲಿ ತೋರಬಂದರೆ ವೃಷ್ಟಿಶೂನ್ಯವಾಗುವದೆಂಬದಾಗಿಯೂ ತಿಳಿಯಬೇಕು

ವಿಶೇಷವಾಗಿ ಕೆಂಪುವರ್ಣದಿಂದಲೇ ಕಾಣಬಂದರೆ ಸುವೃಷ್ಟಿಯುಂಟಾಗಿ ರಾಜಪೀಡೆಗಳಾಗುವದೆಂತಲೂ, ಕರೀವರ್ಣದಿಂದಿದ್ದರೆ ಅಪಾರವಾದ ಮಳೆಯುಂಟಾಗಿ ದೇಶದಲ್ಲಿ ಧಾನ್ಯ ಸಂಪತ್ತು ಬಾಹುಳ್ಯವಾಗುವದೆಂಬದಾಗಿಯೂ ಭಾವಿಸಬೇಕು

ಹಳದಿಯಬಣ್ಣವಾಗಿ ಆ ಕೆಮ್ಮುಗಿಲು ಕಾಣಬಂದರೆ ವಿಶೇಷವಾದ ಮಳೆಯುಂಟಾಗಿ ವ್ಯಾಪಾರಾಭಿವೃದ್ಧಿಯು, ಅದು ಮಿಶ್ರವಾದ ಕಪ್ಪುಕಾಣಲು ವರ್ಷಾಭಾವವಾಗಿ ಅಂತ್ಯದಲ್ಲಿ ಸಾಮಾನ್ಯವೃಷ್ಟಿಯುಂಟಾಗುವದು

ಕೆಮ್ಮುಗಿಲು ಕಾಣಬಂದ ಸಮಯದೊಳು ಹಳದಿಯಬಣ್ಣವಾಗಿದ್ದರೆ ವರ್ಷಾಭಾವವಾಗಿ ಅರ್ಧದೇಶಕ್ಕೆ ಕ್ಷಾಮವು ಸಂಭವಿಸುವದು ಮತ್ತು ಪರಸ್ಪರವಾಗಿ ಧೊರೆಗಳಿಗೆ ಕಲಹಗಳು ಸಂಭವಿಸಿ ಉತ್ಪಾತಸೂಚಕವಾಗಿರುವದು

ಪಂಚಲೋಹದ ವರ್ನಗಳೂ ಅಂದರೆ ಐದುವಿಧವಾದ ಬಣ್ಣಗಳಿಂದ ಕಾಣಬಂದರೆ ಅತಿವೃಷ್ಟಿಯೋಗಗಳೆಲ್ಲಾ ಕಳೆದು ಸಾಮಾನ್ಯವಾಗಿ ಮಳೆಯುಂಟಾಗುವದೆಂದರಿಯಬೇಕು

—(ಉರಿದು ಬೀಳುವ ನಕ್ಷತ್ರದ ಫಲವು)—

ಪೂರ್ವದಿಕ್ಕಿನಲ್ಲಿ ಆಕಾಶದೊಳು ನಕ್ಷತ್ರವು ಮೇಲಿನಿಂದ ಉರಿಯುತ್ತಾ ಭೂಮಿಗೆ ಬಿದ್ದರೆ ಮುಂದೆ ದೇಶದ ಅರಸರಿಗೆ ಮೃತಿಯುಂಟಾಗಿ ಸಕಲ ರಾಜಕಾರ್ಯಗಳಿಗೂ ಕುಂದಕವುಂಟಾಗುವದೆಂದು ಭಾವವು

ಆಗ್ನೇಯ ದಿಕ್ಕಿನಲ್ಲಿ ನಕ್ಷತ್ರವು ಬೀಳಲಾಗಿ ಉನ್ನತವಾದ ದೇವಪೂಜಾದಿಗಳು ಮಾಡುತ್ತಲಿದ್ದರೂ ಸ್ತ್ರೀಯರೆಲ್ಲಾ ಅನ್ಯರಿಗೆ ವಶರಾಗಿ ಬಾಳಬೇಕಾಗುವದೆಂಬ ಭಾವವು

ದಕ್ಷಿಣ ದಿಕ್ಕಿನಲ್ಲಿ ಉರಿದು ಬೀಳುವದಾಗಲು ದೇಶದಲ್ಲಿ ಅತ್ಯಂತ

ವಾದ ದುರ್ಭಿಕ್ಷಡಾಮರವುಂಟಾಗಿ ಪ್ರಜೆಗಳಿಗೆಲ್ಲಾ ಯಮನ ಪಟ್ಟಣದೊಳು ಮನೆಗಳು ಸಿದ್ಧವಾಗಿರುವದಲ್ಲದೆ ದಕ್ಷಿಣದಿಕ್ಕೆಲ್ಲಾ ನಾಶವನ್ನೈದುವದು

ನೈರುತ್ಯ, ಪಶ್ಚಿಮ ಈ ದಿಕ್ಕುಗಳಲ್ಲಿ ನಕ್ಷತ್ರವು ಜ್ವಾಲಾರೂಪದಿಂದ ಬೀಳಲ್ದು ಲೋಕದಲ್ಲೆಲ್ಲಾ ಉತ್ತಮವಾದ ಮಳೆಯಿಂದ ಫಲ ಸವೃದ್ಧಿಯಾಗುವದು, ಮತ್ತು ಅರಸುಗಳು ಕಾನನಗಳಿಗೆ ಹೋಗಿ ಪರ್ವತ ದುರ್ಗಗಳನ್ನೆಲ್ಲಾ ನಾಶಪಡಿಸಿ ರಣ ಶೂರರಾಗಿರುವರು

ವಾಯುವ್ಯ ದಿಶಿಯಲ್ಲಿ ನಕ್ಷತ್ರವು ಉರಿದು ಬಿದ್ದರೇ ಆ ಪ್ರಾಂತ್ಯವೆಲ್ಲಾ ಹಾಳಾಗಿ ಹೋಗುವದು ಪೃಥ್ವೀಪಾಲರು ಶೀಘ್ರದಿಂದ ಮರಣವನ್ನು ಹೊಂದುವರಲ್ಲದೆ ಅಲ್ಲಲ್ಲಿ ಮಾರಿ ಕೋಪದ್ರವವೂ ಬಾಹುಳ್ಯವಾಗಿರುವದು

ಉತ್ತರ ದಿಕ್ಕಿನಲ್ಲಿ ನಕ್ಷತ್ರವು ಬೀಳುವದಾದರೆ ಸ್ತ್ರೀಯರಿಗೆ ಕಾಮಾಧಿಕ್ಯಉಂಟಾಗಿ ಅನ್ಯರ ಕೈಸೇರುವದಲ್ಲದೆ ಜಗತ್ತಿನಲ್ಲಿ ಸುವೃಷ್ಟಿಯಿಂದ ಉತ್ತಮವಾದ ಫಲವು ಕೈಸೇರುವದೆಂದಾಶಯವು

ಈಶಾನ್ಯ ದಿಕ್ಕಿನಲ್ಲಿ ನಕ್ಷತ್ರವು ಬಿದ್ದರೆ ದೇಶದಲ್ಲಿ ಕ್ಷಾಮಡಂಬರವುಂಟಾಗಿ ಅವನೀನಾದರು ನಾಶವನ್ನೈದಿ ಪ್ರಜೆಗಳು ನಾನಾವಿಧವಾದ ತೊಂದರೆಗಳುಳ್ಳವರಾಗುವರು

ಅಂತರಿಕ್ಷದಲ್ಲಿಯೇ ನಕ್ಷತ್ರವು ಬೀಳುವ ಸಮಯದಲ್ಲಿ ಅದೃಶ್ಯವಾದರೆ ಮಂಗಳವಾಗಿಯು ಅರ್ಧ ಭಾಗವು ಬಂದು ಬಿದ್ದರೆ ಕಡುಕಷ್ಟವಾಗಿಯು ಭೂಮಿಗೆ ಬಿದ್ದದ್ದೇ ಆದರೆ ಮೂರುಲೋಕಗಳಿಗೂ ಹಾನಿಯುಂಟಾಗುವುದಾಗಿಯು ಇರುವುದು

—(ರಾತ್ರಿಕಾಲದ ಇಂದ್ರಚಾಪಫಲವು)—

ಇಂದ್ರನ ಧನುಸ್ಸು ರಾತ್ರಿಕಾಲದಲ್ಲಿ ಉಂಟಾದರೆ ಸಕಲ ರಾಷ್ಟ್ರದ ಪ್ರಜೆಗಳಿಗೂ ನಾಶನಕರವೆಂತಲೂ ಪೂರ್ವ ಮೊದಲಾದ ದಿಕ್ಕುಗಳಲ್ಲುಂಟಾಗಲು ಕ್ಷಾಮಡಂಬರವು ತಪ್ಪದೆಂತಲೂ ಭಾವವು

ರಾತ್ರಿಕಾಲದಲ್ಲಿ ಪಶ್ಚಿಮ ದಿಕ್ಕಿನೊಳಗೆ ಇಂದ್ರಚಾಪವು ಕಾಣಬಂದರೆ ಸಕಲ ಲೋಕಗಳಿಗೂ ಕಡುಕಷ್ಟವುಸಂಭವಿಸುದೆಂತಲೂ ಕೆಂಪುವರ್ಣದಿಂದ್ದರೆ ದೇಶದಲ್ಲಿನ ಕ್ಷತ್ರಿಯವಂಶವೇ ಉಳಿಯುವದಿಲ್ಲವೆಂಬದಾಗಿಯೂತಿಳಿಯಬೇಕು

ರಾತ್ರಿಕಾಲದಲ್ಲಿ ಉಂಟಾದ ಇಂದ್ರಚಾಪದ ವರ್ಣವು ಶುಭ್ರವಾಗಿದ್ದರೆ ಬ್ರಾಹ್ಮಣ ವರ್ಣದವರಿಗೆ ಕೇಡುಸಂಭವಿಸುವುದೆಂತಲೂ, ಹಳದಿಯ

ವರ್ಣವಾದರೆ ವೈಶ್ಯವರ್ಗಕ್ಕೆ ಹಾನಿಯೆಂಬದಾಗಿಯು, ಕಪ್ಪುವರ್ಣವಾಗಿ ರಲು ಶೂದ್ರಜಾತಿಗೆ ಹಾನಿಯೆಂತಲೂ ತಿಳಿಯಬೇಕು

ಹಸರು ವರ್ಣದಿಂದ್ದಿದರೆ ಸಂಕರ ಜಾತಿಗಳಿಗೆಲ್ಲಾ ನಾಶನಕಾರಣ ವಾಗಿ ಸಕಲ ದೇಶಗಳೂ ಲಯವನ್ನೈದುವದು ಮತ್ತು ಆ ಸಂವತ್ಸರ ವರ್ಷಾಭಾವದಿಂದ ಫಲ ಶೂನ್ಯವೂ ಉಂಟಾಗುವದು

ಭಾನು ಮಂಗಳವಾರಗಳ ವಾರಗಳಲ್ಲಿ ರಾತ್ರಿಕಾಲದಲ್ಲಿ ಇಂದ್ರ ಚಾಪವು ಕಾಣಬಂದರೆ ನಾನಾ ವಿಧಗಳಾದ ಕಷ್ಟಗಳುಂಟಾಗುವವು ಸೋ ಮ ಬೃಹಸ್ಪತಿ ವಾರಗಳಲ್ಲಾದರೆ ಬ್ರಾಹ್ಮಣಕುಲಕ್ಕೆ ಅಪಮೃತ್ಯುವು ಸಂ ಭವಿಸುವದು ಬುಧವಾರದಲ್ಲುಂಟಾಗಲು ವೈಶ್ಯಜಾತಿಗೆ ಹಾನಿಯು ಸಂಭ ವಿಸುವದು

ಇಂದ್ರಚಾಪವು ರಾತ್ರಿಕಾಲದಲ್ಲಿ ಶುಕ್ರ ಶನಿವಾರಗಳಲ್ಲಿ ಕಾಣಲು ಶೂದ್ರಜಾತಿಗೆ ಹಾನಿಯು ತಪ್ಪದೆ ಸಂಭವಿಸುವದೆಂತಲೂ ಯಾವಫಲವೂ ಆಸಂವತ್ಸರದಲ್ಲಿ ಸಮೀಚೀನಭಾವದೊಳಿರಲಾರದೆಂತಲೂ ತಿಳಿಯಬೇಕು

ಪೂರ್ವದಿಕ್ಕಿನಲ್ಲಿ ರಾತ್ರಿಕಾಲದೊಳು ಇಂದ್ರಚಾಪವಿದ್ದರೆ ಸಕಲ ದೇಶಗಳೂ ಕೆಟ್ಟು ಅರಣ್ಯಗಳಂತಾಗುವವು ಅಂದರೆ ಬಂದೊಂದು ಯೋ ಜನಕ್ಕೆ ಬಂದೊಂದು ಊರುಗಳಂತೆ ನಿಲ್ಲುವದೆಂಬಾಶಯವು

ರಾತ್ರಿಯ ಕಾಲದಲ್ಲಿ ಇಂದ್ರಚಾಪವು ದಕ್ಷಿಣದಿಕ್ಕಿನಲ್ಲೇಳಲು ಅತಿ ಶೀಘ್ರದಿಂದ ಕ್ಷಾಮವು ಸಂಭವಿಸುವದೆಂತಲೂ ದೇಶದ ಜನರೆಲ್ಲಾ ಒಬ್ಬ ರನ್ನೊಬ್ಬರು ಭಕ್ಷಿಸುವರಾಗುವರೆಂಬದಾಗಿಯೂ ಭಾವಿಸಬೇಕು

ಉತ್ತರದಿಕ್ಕಿನಲ್ಲಿ ಇಂದ್ರಚಾಪವು ರಾತ್ರಿಕಾಲನಲ್ಲಿ ಉಂಟಾದರೆ ಅತ್ಯಂತ ಸಮೃದ್ಧಿ ಮಳೆಯುಂಟಾಗಿ ವಿಶೇಷ ಪಲವಾಗುವದೆಂತಲೂ ಸಾ ಮಾನ್ಯವಾದ ಭೀತಿಯಿಂದ ಧರ್ಮಾಭಿವೃದ್ಧಿಯಾಗುವದೆಂಬದಾಗಿಯೂ ತಿಳಿಯಬೇಕು

ಪಶ್ಚಿಮ ದಿಕ್ಕಿನಲ್ಲಿ ಮೇಘವು ಕೆಂಪುವರ್ಣದಿಂದಿರಲು ಅತಿಜಾಗ್ರತೆ ಯಾಗಿಯೇ ವರ್ಷಯೋಗ ಉಂಟಾಗುವದೆಂತಲೂ ಉತ್ತರ ದಿಕ್ಕಿನಲ್ಲಾ ಗಲು ತೀವ್ರದಿಂದಲೇ ಅತಿ ವೃಷ್ಟಿಯೋಗವಾಗುವದೆಂಬದಾಗಿಯೂ ತಿಳಿ ಯಬೇಕು

ನೂತನವಾದ ವರ್ಣಗಳಿಂದ ನೂತನ ದಿಕ್ಕಿನಲ್ಲಿ ಮೇಘಾವರಣಗಳಾಗಲು ಎಲ್ಲಾ ಮಳೆಗಳೂ ಕಡಮೆಯಾಗುವವೆಂದು ಮುಖ್ಯವಾಗಿ ತಿಳಿಯಬೇಕು

—(ಧಾರಣೆ ವಾಸಿಗಳ-ವಿಷಯವು)—

ಯಾವ ತಿಂಗಳಲ್ಲಿಯೋ ಆಗಲಿ ಶುಕ್ಲಪಕ್ಷದ ಬಿದಿಗೆ-ತಿಥಿಯಲ್ಲು ದಯಿಸುವ ಚಂದ್ರನ ಶೃಂಗಗಳಂ ನೋಡಿ ತನ್ಮೂಲಕ ಅರ್ಘವೃದ್ಧಿಗಳ ವಿಷಯಗಳಂ ಪೇಳಬೇಕಾಗಿರುವದು

ಮೀನ ಮೇಷ ತುಲಾ ಈ ಲಗ್ನಗಳಲ್ಲಿ ದಕ್ಷಿಣಶೃಂಗವು ಉನ್ನತವಾದ್ದರೆ ಧಾರಣೆಯು ಕಡಮೆಯಾಗಿ ಅಬಲೆಯರು ಮಾನಗಳಂ ಸಂಪಾದಿಸಲ್ಪಟ್ಟು ಸಮೃದ್ಧಿಯಾದ ಫಲಪೂರ್ವದಿಂದಿರುವುದು

ಕನ್ಯಾ ಮಿಥುನ ವೃಷಭ ಈ ಲಗ್ನಗಳಲ್ಲಿ ಚಂದ್ರನ ಶೃಂಗಗಳು ಸಮವಾಗಿರಲು ಸಾಮಾನ್ಯವಾಗಿ ಅರ್ಘವೃದ್ಧಿಯು ಸಾಮಾನ್ಯವಾದ ಮಳೆಯೂ ಉಂಟಾಗುವದೆಂದರಿಯಬೇಕು

ಧನುಸ್ಸು ಮಕರ ಕುಂಭ ಈ ರಾಶಿಗಳಿಗೆ ಉತ್ತರ ಶೃಂಗೋನ್ನತವಾಗಿದ್ದರೆ ಅರ್ಘವೃದ್ಧಿಯು ಅಧಿಕವಾಗಿ ಜನಗಳೆಲ್ಲಾ ಸುಖಾನುಭವದಲ್ಲಿರುವರು

ಕರ್ಕಾಟಕ ಸಿಂಹ ವೃಶ್ಚಿಕ ಈ ರಾಶಿಗಳೊಳು ಉತ್ತರಶೃಂಗೋನ್ನತವಾಗಿದ್ದರೆ ಸಕಲ ಪದಾರ್ಥಗಳಿಗೂ ಅರ್ಘವೃದ್ಧಿಯು ಒಂದೇ ಸಮನಾಗಿರುತ್ತಾ ಸುಭಿಕ್ಷಕರವಾಗಿರುವದು

ಉತ್ತರದಿಕ್ಕಿನಲ್ಲಿ ಶೃಂಗವು ಉನ್ನತವಾಗಿದ್ದರೆ ಭೂಮಂಡಲದಲ್ಲಿ ಕ್ಷಾಮವುಂಟಾಗಿ ಧಾನ್ಯವು ಕಡಮೆಯಾಗಿಯು ರೊಕ್ಕವು ಬಲವಾಗಿಯು ಇರುವದು

ಚಂದ್ರನ ಶೃಂಗಗಳು ಸಮವಾಗಿದ್ದಪಕ್ಷದಲ್ಲಿ ಅನವರತವೂ ಸಾಮಾನ್ಯವಾದ ಮಳೆಯುಂಟಾಗಿ ಫಲಾಭಿವೃದ್ಧಿಯೂಕೊಂಚವಾಗಿರುವದು

—(ಚಂದ್ರೋದಯ ಕಾಲದಫಲವು)—

ಶುಕ್ಲಪಕ್ಷದಲ್ಲಿ ಚಂದ್ರೋದಯವಾಗುವ ಸಮಯದಲ್ಲಿ ಪ್ರಥಮದಲ್ಲಿ ದಕ್ಷಿಣದ ಶೃಂಗವು ಉದಯವಾದಂತೆ ಕಾಣಲು ವೃಷ್ಟಿಶೂನ್ಯವಾಗಿ ಅರ್ಘವು ಕಡಮೆಯಾಗುವದು

ಚಂದ್ರನು ಉತ್ತರ ದಿಙ್ಮುಖದಿಂದ ಆ ಶೃಂಗವು ಉನ್ನತವಾಗಿ ಉದಯವಾದರೆ ಅನಾವೃಷ್ಟಿಯು ಸಂಭವಿಸಿ ಸಕಲ ದಾನ್ಯಗಳು ನಾಶವಾಗುವದು

ದಕ್ಷಣದಿಕ್ಕಿನಲ್ಲಿ ವುದಯವಾಗಲು ಕ್ಷಾಮಡಂಬರವುಂಟಾಗಿ ಸಕ

ಲಧಾನ್ಯಗಳೂ ಪ್ರಿಯುವಾಗುವವೆಂದು ಭಾವವು

ಚಂದ್ರನು ಸಮಶೃಂಗದಲ್ಲುದಯವಾಗಲು ಸಕಲ ಧಾನ್ಯಗಳೂ ಕಡಮೆಯಾಗುವುದಲ್ಲದೆ ಧರಾಮಂಡಲದಲ್ಲಿ ಜನಗಳೆಲ್ಲಾ ರೋಗಪೀಡಿತ ರಾಗಿರುವರು.

—(ವಾ ರ ಫ ಲ ವು)—

ಬೃಹಸ್ಪತಿಯು, ಶುಕ್ರ, ಬುಧ, ಈ ವಾರಗಳಲ್ಲಿ ಶೃಂಗೋದಯ ವಾದರೆ ಅರ್ಘವು ಹೆಚ್ಚಾಗಿಯು, ಶನ್ಯಂಗಾರಕ ವಾರಗಳಲ್ಲಾದರೆ ಸಂತೋಷ ವುಂಟಾಗಿ ಅರ್ಘಗಳೆಲ್ಲಾ ಕಡಮೆಯಾಗುವದೆಂತಲೂ ತಿಳಿಯಬೇಕು

ಅಮಾವಾಸ್ಯೆ ಶನಿಯ ತಾರೆಗೆ ಕ್ರಮವಾಗಿ ಸಂಯೋಗವಾದರೆ ಆ ನಕ್ಷತ್ರದಲ್ಲಿ ಚಂದ್ರನುದಿಸಿದರೆ ಕಪ್ಪುಧಾನ್ಯಗಳೆಲ್ಲಾ ವಿಶೇಷವಾಗಿ ಫಲಿಸುವು ವೆಂದಾಶಯವು

ಶುಭನಕ್ಷತ್ರದಗಳು ಅಮಾವಾಸ್ಯೆಗೆ ಸಂಯೋಗವಾಗಲಾಗಿ ಆನಕ್ಷತ್ರದಲ್ಲಿ ಚಂದ್ರೋದಯವಾದರೆ ಕೆಂಪುಧಾನ್ಯಗಳು ಫಲಿಸುವವು,

ಅಮಾವಾಸ್ಯೆಗೆ ಶುಕ್ರತಾರಾ ಸಂಯೋಗದಿಂದಿರುವಾಗ ಆ ನಕ್ಷತ್ರದಲ್ಲಿಯೇ ಚಂದದ್ರೋದಯವಾದರೆ ಇತರ ಧಾನ್ಯಗಳು ಅಂದರೆ ಸಣ್ಣಧಾನ್ಯಗಳು ಫಲಿಸದೆ ಮುಂದೆ ಅಧಿಕವಾಗುವವು ವೆಂದಾಶಯವು

ಬೃಹಸ್ಪತಿಯ ನಕ್ಷತ್ರವು ಅಮಾವಾಸ್ಯೆ ಯೊಳಗೆ ಯೋಗವಾಗಲಾಗಿ ಆ ನಕ್ಷತ್ರದಲ್ಲಿ ಚಂದ್ರೋದಯವಾದರೆ ಲೋಕದಲ್ಲಿ ಹಾರಕವೆಂಬ ಧಾನ್ಯವು ಫಲಿಸುವದಿಲ್ಲ ವೆಂದಭಿಃಪ್ರಾಯವು

ತಿಂಗಳಿಗೆ ಸರಿಯಾಗಿ ಅಮಾವಾಸ್ಯೆಯಾದರೆ ಸಮಾರ್ಘವಾಗಿಯು ಅಂಗಡಿಯು ಧಾನ್ಯಗಳು ವೃದ್ಧಿಯಾಗಿ ಅರ್ಘಬಾಹುಳ್ಯದಿಂದಲು ಇರವದು

ಶನಿಯು ಸಸ್ಯಾಧಿಪನಾಗಿ ಶನಿಯು ಗ್ರಹಗಳಿಗೆ ಮುಂದೆ ನಡೆಯುತ್ತಿರಲು ಸಾಮಾನ್ಯವಾದ ಮಳೆಯಿಂದಲೂ ವಿಶೇಷಫಲ ಉಂಟಾಗವದು

ಅಂಗಾರಕನು ಸಸ್ಯಾಧಿಪನಾದರೆ ಇತರ ಗ್ರಹಗಳಿಗೆ ಹಿಂದೆ ಶುಕ್ರನಿರುವನಾದರೆ ಮತ್ತು ಸೂರ್ಯನು ಮಧ್ಯದಲ್ಲಿರುವಾಗ ಅರ್ಘವು ಸಾಮಾನ್ಯವಾಗಿರುವುದೆಂದು ತಿಳಿಯಬೇಕು

ಕ್ರೂರಗ್ರಹಗಳ ಯೋಗಗಳುಂಟಾದರೆ ಶುಕ್ರನು ಮಖಾನಕ್ಷತ್ರದಲ್ಲಿರುವಾಗ ಬುಧ, ಸೂರ್ಯನು ಮಧ್ಯವರ್ತಿಗಳಾಗಿದ್ದ ಪಕ್ಷದಲ್ಲಿ ಅರ್ಘವು

ಕಡಮೆಯಾಗುವುದು.

ಬುಧನು ಶತಭಿಷೆಗೆ ಬಂದರೆ ರಾಜಪತ್ನಿಯರೆಲ್ಲಾ ಅಗ್ನಿಯ ಪಾಲಾಗುವುರು, ಭೂಮಿಯಲ್ಲಿ ರೋಗೋಪದ್ರವವು ಅಧಿಕವಾಗಿ ಕಾಂಚೀ ದೇಶವು ಲಯವನ್ನೈದುವುದು

ಪೂರ್ವಾಭಾದ್ರಾ ನಕ್ಷತ್ರದಲ್ಲಿ ಶನಿಯುಂ ಇರುತ್ತಿರಲಾಗಿ ಲೋಕದಲ್ಲಿವಿಶೇಷವುಳೆ ಯುಂಟಾಗಿ ಫಲಾಧಿಕ್ಯ ವಾಗುವುದಲ್ಲದೆ ಗೋವುಗಳೆಲ್ಲಾ ಯಥೇಷ್ಟವಾಗಿ ಹಾಲುಗಳಂ ಕೊಡುತ್ತಾ ಧನ, ಧಾನ್ಯ, ವೃದ್ಧಿಯುಬಲವಾಗಿರುವುದು.

—*(ಮಿ ಂ ಚಿ ನ ಫ ಲ ವು )*—

ಹರಿಮಿಂಚೆಂತಲು, ಹರನಮಿಂಚೆಂತಲು, ಸುಜನಮಿಂಚೆಂಬದಾಗಿಯೂ ಮಿಂಚುಗಳು ಮೂರುತರವೆಂದು ತಿಳಿಯಬೇಕು.

ಪೂರ್ವದಿಕ್ಕಿನಲ್ಲಿ ಮಿಂಚಿದರೆ ವಿಶೇಷವಾದ ವೃಷ್ಟಿ ಯುಂಟಾಗುವುದೆಂತಲೂ, ಆಗ್ನೇಯದಲ್ಲಿ ಮಿಂಚಿದರೆ ಅಲ್ಪವೃಷ್ಟಿ ಯುಂಟಾಗಿಕೊಂಚ ಫಲ ವಾಗುವುದೆಂಬದಾಗಿಯೂ ಭಾವವು

ದಕ್ಷಿಣದಿಕ್ಕಿನಲ್ಲಿ ಮಿಂಚಿದರೆ ಅಲ್ಪವೃಷ್ಟಿಯೆಂತಲೂ, ನೈರುತ್ಯದಲ್ಲಿ ಮಿಂಚಲು ಕ್ಷಾಮವೆಂತಲೂ, ಪಶ್ಚಿಮದಲ್ಲಿ ಸಾಮಾನ್ಯವೆಂಬದಾಗಿಯುಂ ಅತ್ಯಂತವಾದ ಘಾಳಿಯುಉಂಟೆಂತಲೂ, ಉತ್ತರದಿಕ್ಕಿನೊಳಾಗಲು ಸಂಪೂರ್ಣವೃಷ್ಟಿಯೆಂತಲೂ ಭಾವವು.

ಈಶಾನ್ಯದಲ್ಲಿಯೂ, ಪೂರ್ವದಲ್ಲಿಯೂ, ಸಮನಾಗಿ ಬಂದೇಕಾಲದೊಳು ಮಿಂಚಿದರೆ ದೇಶದಲ್ಲಿ ಅತ್ಯಂತ ಶೀಘ್ರದಿಂದ ವಿಶೇಷವಾಗಿ ವರ್ಷಿಸುವುದೆಂದಾಶಯವು.

ಹರಿಮಿಂಚಿ ಅರ್ಧಮಳೆಯು, ಹರಮಿಂಚಿನೊಳು ವೃಷ್ಟಿಭಾಹುಳ್ಯವು ಮತ್ತು ಅಧಿಕವಾದ ಸಿಡಿಲು ಉಂಟಾಗಿ ಸುಭಿಕ್ಷವಾಗಿರುವುದು.

ಅನುದಿನದ ಮಳೆಗಳಲ್ಲಿ ಘನತರವಾದ ಮಿಂಚುಗಳುಂಟಾದರೆಅಧಿಕವಾದ ಮಳೆ ಯುಂಟಾಗುವುದೆಂತಲೂ, ಅನುನಯದಿಂದ ಹರಿಯಮಿಂಚುಂಟಾಗಲು ಅರ್ಧವೃಷ್ಟಿಯುಂಟಾಗಿ ಫಲ ಸಾಮಾನ್ಯವಾಗಿರುವುದೆಂದು ಭಾವವು.

—*(ಅ ಷ್ಟ ದಿ ಕ್ಕಿ ನ ಗಾ ಳಿ ಯು ಫ ಲ ವು.)*—

ಪೂರ್ವದಿಕ್ಕಿನಲ್ಲಿ ಘಾಳಿಯು ಬೀಸಿದರೆ ತಪ್ಪದೆ ಮಳೆಯು ಬರು

ವುದೆಂತಲೂ, ಆಗ್ನೆಯದಲ್ಲಿ ಬೀಸಲು ಅಲ್ಪವೃಷ್ಟಿ ಯೆಂಬದಾಗಿಯು, ದಕ್ಷಿಣವಲ್ಲಿ ಮಳೆಯ ಯೋಗಕ್ಕೆ ಸಂಶಯವೆಂತಲು,ನೈರುತ್ಯದಲ್ಲಿ ಅಲ್ಪವೃಷ್ಟಿ ಯೆಂಬದಾಗಿಯೂ ತಿಳಿಯಬೇಕು

ಪಶ್ಚಿಮದಲ್ಲಿ ಅತಿವೃಷ್ಟಿಯೆಂತಲೂ, ವಾಯುವ್ಯದಲ್ಲಿ ತಿವ್ರದಿಂದಮಳೆ ಯುಂಟಾಗುವುದಾಗಿಯು, ಉತ್ತರದಲ್ಲಿ ಬೀಸಿದರೆ ಅತಿವೃಷ್ಟಿಎಂತಲೂ ಈಶಾನ್ಯದಿಕ್ಕಿನಲ್ಲಿಬೀಸಿದರೆ ಅರ್ಧವೃಷ್ಟಿಯೆಂದುನ್ನು ತಿಳಿಯಬೇಕು

ಅತ್ಯಂತವಾದ ಘಾಳಿಯು ಬೀಸಿ ತಡಯಿಲ್ಲದೆ ಮಳೆಗಳುಬಂದು ಲೊಕೋತ್ತಮವಾದ ವರ್ಷಯೋಗ ವುಂಟಾಗುವುದು ಅತ್ಯಂತವಾದ ದೂಳಿನೊಳು ಬರುತ್ತಿರಲು ಭೂಮಿಯಲ್ಲಿ ಯಾವ ಮಳೆಯೂ ಆಗುವುದಿಲ್ಲವು.

ಘಾಳಿಯು ನೆಲಕ್ಕೆ ಹತ್ತಿ ಬೀಸುವಂತ್ಥಾದ್ದಾದರ ಸಕಲವಾದ ಮಳೆಗಳೂ ತಡೆಯಿಲ್ಲದೆ ನಡಸುವುವಲ್ಲದೆ ಜಗತ್ತಿನಲ್ಲಿ ಅತಿವೃಷ್ಟಿಯಿಂದ ಜಲಪ್ರಳಯ ವಾಗುವುದೆಂದು ಭಾವವು

ಉತ್ತರದಿಕ್ಕಿನ ಘಾಳಿಯು ಬೀಸಿದರೆ ಆಕಾಲದಲ್ಲಿ ಶುಭಗ್ರಹಗಳ ಯೋಗವಿರಲು ಉತ್ತಮವಾದ ವರ್ಷಯೋಗದಿಂದ ಜಲಪ್ರಳಯವುತಪ್ಪದೆಂದು ಭಾವವು.

ಮೇಘಗಳು ಆವರಿಸಿಕೊಂಡು ವರ್ಷವು ಸುರಿಯುತ್ತಲಿರುವ ಸಮಯದಲ್ಲಿ ತಂಪಾದ ಘಾಳಿಯು ಸಾಮನ್ಯವಾಗಿ ಬೀಸಿದರೆ ಆ ನಿಮೇಷಮಾತ್ರದಲ್ಲಿಯೇ ಅಧಿಕವಾದ ಮಳೆ ಯುಂಟಾಗುವುದು. ಅಂಥಾಸಮಯದಲ್ಲಿ ಚಂಡಮಾರುತವೆಂಬ ಬಿರುಘಾಳಿಯಾದ ಸುಂಟರುಘಾಳಿಯುಬೀಸಿದ್ದೇ ಆದರೆ ವೃಷ್ಟಿಯೋಗವು ಕ್ಷಯವಾಗುವುದೆಂದರಿಯತಕ್ಕ ಭಾವವು.

ವ ಚ ನ ಮೇ ಘ ಮಾ ಲಾ

ಸಂ ಪೂ ರ್ಣ ವು



Printed by A R. Venkatesa Setty.